ಪ್ರಥಮ ಮುದ್ರಣ ೧೯೫೩

ಪ್ರಕಾಶಕರು :

**ಸ್ವಾಮಿ ಶಾಂಭವಾನಂದ**

ಅಧ್ಯಕ್ಷ

ಶ್ರೀರಾಮಕೃಷ್ಣಾಶ್ರಮ, ಮೈಸೂರು

ಮೈಸೂರು ಸಯ್ಯಾಜಿರಾವ್ ರೋಡಿನಲ್ಲಿರುವ ಶ್ರೀಪಂಚಾಚಾರ್ಯ ಎಲೆಕ್ಟ್ರಿಕ್
ಪ್ರೆಸ್ಸಿನಲ್ಲಿ ಡಿ. ರಾಜರತ್ನಂ ಅವರಿಂದ ಮುದ್ರಿಸಲ್ಪಟ್ಟಿತು

# ದೇವದೂತ ಏಸುಕ್ರಿಸ್ತ

ಅಲೆಯೊಂದು ಸಾಗರದಲ್ಲಿ ಏಳುವುದು, ಪುನಃ ಬೀಳುವುದು. ಮತ್ತೊಂದು ಅಲೆ ಹಿಂದಿನ ಅಲೆಗಿಂತ ದೊಡ್ಡದಾಗಿರಬಹುದು, ಅದೇಳುವುದು ಪುನಃ ಬೀಳುವುದು, ಪುನಃ ಏಳುವುದು, ಹೀಗೆ ಮುಂದೆ ಸಾಗುವುದು ಜಗದ ಜೀವನಗತಿಯಲ್ಲಿಯೂ ಹೀಗೆ ಏಳುಬೀಳುಗಳನ್ನು ನೋಡುವೆವು. ನಮ್ಮ ಗಮನವೆಲ್ಲ ಹೆಚ್ಚಾಗಿ ಏಳಿನ ಕಡೆ. ಬೀಳಿನ ಕಡೆ ದೃಷ್ಟಿಯೆ ಬೀಳುವುದಿಲ್ಲ ಆದರೆ ಎರಡೂ ಅವಶ್ಯಕ, ಎರಡೂ ಮುಖ್ಯ ವಾದುವೆ ಇದೇ ಪ್ರಪಂಚದ ಸ್ವಭಾವ. ಆಲೋಚನಾಕ್ಷೇತ್ರದಲ್ಲಾಗಲಿ ಸಮಾಜದ ವ್ಯವಹಾರದಲ್ಲಾಗಲಿ ಆಧ್ಯಾತ್ಮಿಕ ಜೀವನದಲ್ಲಿ ಆಗಲಿ ಎಲ್ಲೆಡೆಯೂ ಈ ಏಳುಬೀಳುಗಳು ಸಾಗುತ್ತಿವೆ ಭವಗತಿಯಲ್ಲಿ ಪ್ರಮುಖ ಉದಾತ್ತಭಾವನೆಗಳು, ಅನಾವಶ್ಯಕವಾದ ಹಿಂದಿನದನೆಲ್ಲ ತಳ್ಳಿ, ಅವನ್ನು ಜೀರ್ಣಿಸಿಕೊಂಡು ಗತಕಾಲದ ನ್ಯೂನಾತಿರೇಕಗಳನ್ನು ಅರಿತುಕೊಂಡು, ಹಿಂದಿನದಕ್ಕಿಂತ ಮತ್ತೂ ಹೆಚ್ಚಿನ ಉಚ್ಛ್ರಾಯಸ್ಥಿತಿಗೆ ಏರುವುದಕ್ಕೆ ಶಕ್ತಿ ಸಂಗ್ರಹಿಸಿಕೊಂಡು ಅಣಿಯಾಗುತ್ತಿರುವುದು.

ದೇಶಗಳ ಇತಿಹಾಸ ಕೂಡ ಎಂದಿಗೂ ಹೀಗೆಯೆ. ಇದು ನಾವು ಯಾರ ವಿಷಯವನ್ನು ತಿಳಿಯಬೇಕೆಂದು ಇರುವೆವೊ ಅಂತಹ ಮಹಾತ್ಮ ದೇವದೂತ ತನ್ನ ದೇಶ ತುಂಬಾ ಅವನತಿಯ ಸ್ಥಿತಿಯಲ್ಲಿದ್ದಾಗ ಬಂದನು. ಅವನ ಉಪದೇಶ ಮತ್ತು ಕಾರ್ಯಗಳ ಅಲ್ಪ ಸ್ವಲ್ಪ ಮಾತ್ರ ನಮಗೆ ಸಂಕ್ಷೇಪವಾಗಿ ದೊರಕುವುದು ಇಂತಹ ಮಹಾವ್ಯಕ್ತಿಯ ಉಪದೇಶ ಮತ್ತು ಘಟನೆಗಳೆಲ್ಲ ದೊರೆತು ಬರೆದಿಟ್ಟಿದ್ದರೆ ಅದು ಬೃಹದಾಕಾರ ತಾಳು ತ್ತಿತ್ತೆಂದು ಹೇಳುವುದು ಸರಿಯೆ. ಮೂರು ವರುಷಗಳ ಅವನ ಕಾರ್‍ಯ ಘನೀಭೂತವಾದ ಒಂದು ಜನಾಂಗದ ಕೇಂದ್ರದಂತಿದೆ. ಪ್ರಪಂಚಕ್ಕೆ ಅದು ವಿವರವಾಗಿ ಪ್ರಕಾಶಕ್ಕೆ ಬರಲು ಹತ್ತೊಂಬತ್ತು ಶತಮಾನಗಳು ಹಿಡಿದಿವೆ. ಅದು ಪೂರ್ಣವಾಗಲು ಇನ್ನೂ ಎಷ್ಟು ಕಾಲ ಬೇಕೊ ಯಾರಿಗೆ ಗೊತ್ತು! ನಮ್ಮ ನಿಮ್ಮಂತಹ ಅಲ್ಪ ವ್ಯಕ್ತಿಗಳು ಎಲ್ಲೊ ಅಲ್ಪ ಸ್ವಲ್ಪ ಶಕ್ತಿಗೆ ಮಾತ್ರ ಹಕ್ಕುದಾರರು. ಅದನ್ನೆಲ್ಲಾ ಪೂರ್ತಿ ಬಳಸಬೇಕಾ

ದರೆ ಕೆಲವು ಕ್ಷಣ ಗಂಟೆ, ಹೆಚ್ಚು ಎಂದರೆ ಕೆಲವು ವರುಷಗಳು ಸಾಕು. ಅನಂತರ ನಾವು ಸಂಪೂರ್ಣ ಕರ್ಮ್ಮರಿಯಾಗುವೆವು ಆದರೆ ಈ ಮಹಾ ಮಹಿಮನನ್ನು ಗಮನಿಸಿ. ಶತಮಾನಗಳ ಮೇಲೆ ಶತಮಾನಗಳು ಉರುಳಿವೆ ಆದರೂ ಅವನು ಪ್ರಪಂಚದ ಮೇಲೆ ಬೀರಿದ ಶಕ್ತಿ ಇನ್ನೂ ಪೂರ್ಣ ವಿಸ್ತಾರವಾಗಿಲ್ಲ. ಇನ್ನೂ ಶಿಥಿಲವಾಗಿಲ್ಲ ಕಾಲಕಳೆದಂತೆ ಅದಿನ್ನೂ ಹೆಚ್ಚು ಪ್ರಬಲವಾಗುತ್ತಾ ಬರುವುದು.

ನಿಮಗೆ ಏಸುಕ್ರಿಸ್ತನ ಜೀವನದಲ್ಲಿ ಅವನ ಹಿಂದಿನ ಕಾಲವೆಲ್ಲವೂ ಅವನಲ್ಲಿ ಅಂತರ್ಗತವಾಗಿರುವುದು ಕಾಣುವುದು. ಒಂದು ರೀತಿ ಪ್ರತಿಯೊಬ್ಬನ ಜೀವನದಲ್ಲಿಯೂ ಅವನ ಭೂತಕಾಲವೆಲ್ಲ ಅಡಗಿದೆ. ವಂಶಪಾರಂಪರ್ಯ ವಾತಾವರಣ ವಿದ್ಯಾಭ್ಯಾಸ ಮತ್ತು ತನ್ನ ಹಿಂದಿನ ಜನ್ಮಗಳು ಇವುಗಳ ಮೂಲಕ ಆವನಿಗೆ ಜನಾಂಗದ ಭೂತಕಾಲವೆಲ್ಲ ಬರುವುದು. ಒಂದು ರೀತಿ ಪ್ರಪಂಚದ ಭೂತಕಾಲ ಇಡೀ ಬ್ರಹ್ಮಾಂಡದ ಭೂತಕಾಲ ಪ್ರತಿಯೊಂದು ಜೀವಿಯಲ್ಲಿಯೂ ಅಂತರ್ಗತವಾಗಿರುವುದು ನಾವು ವರ್ತಮಾನಕಾಲದಲ್ಲಿ ಆಗಿರುವುದು ಅನಂತ ಭೂತಕಾಲದ ಪರಿಣಾಮವಲ್ಲದೆ ಮತ್ತೇನು ? ಘಟನೆಗಳು ಅನಂತ ಪ್ರವಾಹದ ಮೇಲೆ ಅನೈಚ್ಛಿಕವಾಗಿ ಮುಂದೆ ನುಗ್ಗುತ್ತ ವಿಶ್ರಾಂತಿ ಸಾಧ್ಯವಿಲ್ಲದ ಕಿರಿ ಅಲೆಗಳಲ್ಲದೆ ಮತ್ತೇನು ? ನಾವು ನೀವುಗಳೆಲ್ಲ ಸಣ್ಣಗುಳ್ಳೆಗಳು. ವಿಶ್ವಘಟನೆಯು ಮಹಾಸಾಗರದ ಮೇಲೆ ಪರ್ವತೋಪಮ ಅಲೆಗಳಿವೆ ನಮ್ಮ ನಿಮ್ಮಲ್ಲಿ ಜನಾಂಗದ ಭೂತಕಾಲ ಎಲ್ಲೋ ಅಲ್ಪವಾಗಿ ವ್ಯಕ್ತವಾಗಿದೆ. ಆದರೆ ಕೆಲವು ಮಹಾವ್ಯಕ್ತಿಗಳಿರುವರು. ಅವರು ಇಡೀ ಭೂತಕಾಲವನ್ನೆ ತಮ್ಮಲ್ಲಿ ಅಳವಡಿಸಿಕೊಂಡು ಅನಂತ ಭವಿಷ್ಯ ಸ್ವೀಕಾರಕ್ಕೂ ಕರಗಳನ್ನು ತೆರೆದಿರುವರು. ಅಲ್ಲಿ ಇಲ್ಲಿ ಇರುವ ಕೈಮರಗಳಂತೆ ಇವರು ಮಾನವ ಪ್ರಗತಿ ಎತ್ತಕಡೆ ಸಾಗುತ್ತಿದೆ ಎಂಬುದನ್ನು ತೋರುವುದು. ಮೇರುಪ್ರಾಯ ವ್ಯಕ್ತಿಗಳಿರುವರು. ಅವರ ಭೀಮಛಾಯೆ ಪೃಥ್ವಿಯನ್ನೆಲ್ಲಾ ವ್ಯಾಪಿಸುವುದು ಅಮರರಾಗಿ ಅಮೃತರಾಗಿ ನಿಂತಿರುವರವರು. ಇದೇ ದೇವದೂತ “ ಯಾರಿಗೂ ಯಾವ ಕಾಲದಲ್ಲಿಯೂ ದೇವರ ಮಗನ ಮೂಲಕವಲ್ಲದೆ ಪ್ರತ್ಯಕ್ಷ ದೇವರ ದರ್ಶನವಾಗಿಲ್ಲ ” ಎಂದು ಹೇಳುವನು. ಇದು ಸತ್ಯ. ಅವನ ಮಗನಲ್ಲಿ ಅಲ್ಲದೆ ನಾವು ಬೇರೆಲ್ಲಿ ದೇವರನ್ನು ಕಾಣುವುದು ? ನಮ್ಮಲ್ಲಿ ನಿಮ್ಮಲ್ಲಿ ಅತಿ ದೀನರಲ್ಲಿ, ನೀಚರಲ್ಲಿ ಕೂಡ ದೇವರಿರು

ವನು. ಅವನನ್ನು ಪ್ರತಿ ಬಿಂಬಿಸುತ್ತಿರುವೆವು ಎಂಬುದೇನೊ ಸತ್ಯ. ಜ್ಯೋತಿಸ್ಪಂದನ ಸರ್ವವ್ಯಾಪಿಯಾಗಿ ಇರುವುದು. ಆದರೆ ಅದರ ದರ್ಶನ ವಾಗಬೇಕಾದರೆ ಒಂದು ದೀಪಿಗೆಯನ್ನು ಹಚ್ಚಬೇಕಾಗಿದೆ. ವಿಶ್ವದ ಸರ್ವವ್ಯಾಪಿಯಾದ ಈಶ್ವರನ ದರ್ಶನ, ದೇವಮಾನವರು ದೇವದೂತರು ಅವತಾರಗಳಂತಹ ವಿರಾಟ್ ಜ್ಯೋತಿಸ್ತಂಭಗಳಲ್ಲಿ ಪ್ರತಿಬಿಂಬಿತವಾಗದೆ ಇದ್ದರೆ ನಮಗೆ ಅರಿವಾಗಲಾರದು.

ದೇವರಿರುವನೆಂದು ನಮಗೆಲ್ಲಾ ಗೊತ್ತಿದೆ ಆದರೂ ನಮಗೆ ಅವನು ಅಗೋಚರನು, ಅವನನ್ನು ತಿಳಿಯಲಾರೆವು. ಇಂತಹ ಒಬ್ಬ ದೇವದೂತರನ್ನು ತೆಗೆದುಕೊಂಡು ನೀವು ಕಲ್ಪಿಸಿಕೊಂಡ ಅತಿಶ್ರೇಷ್ಠ ಭಗವದ್ಭಾವನೆಯೊಂದಿಗೆ ಇಂತಹ ಮಹಾಮಹಿಮರ ಶೀಲವನ್ನು ಹೋಲಿಸಿ ನೋಡಿ. ಆಗ ನಿಮ್ಮ ಭಗವಂತನ ಭಾವನೆ ಕಡಿಮೆಯಾಗಿ ಮಹಾವ್ಯಕ್ತಿಯ ಶೀಲ ಇವನ್ನೂ ಮೀರಿ ನಿಲ್ಲುವುದು. ಜನ್ಮವೆತ್ತ ಮಹಾ ಮಹಿಮರು ಯಾವುದನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ನಮಗೆ ಮೇಲ್ಪಂಕ್ತಿಯಂತೆ ಇರುವರೊ ಅವರಿಗಿಂತ ಉತ್ತಮನಾದ ಭಗವಂತನ ಭಾವನೆಯನ್ನು ನೀವು ಊಹಿಸಲೂ ಆರಿರಿ. ಆದಕಾರಣ ಇಂತಹ ಮಹಾಮಹಿಮರ ಚರಣಗಳಿಗೆರಗಿ ಪ್ರಪಂಚದಲ್ಲಿ ದೇವಾಂಶ ಪುರುಷರು ಇವರುಮಾತ್ರ ಎಂದು ಆರಾಧಿಸುವುದರಲ್ಲಿ ಪಾಪವೇನಿರು ವುದು? ನಮ್ಮ ಭಗವದ್ಭಾವನೆಗಳೆಲ್ಲಕ್ಕಿಂತಲೂ ಅವರು ನಿಜವಾಗಿಯೂ ಮೇಲಾಗಿದ್ದರೆ ಅವರನ್ನು ಪೂಜಿಸುವುದರಿಂದ ಯಾವ ದೋಷವಿದೆ? ದೋಷವಿರುವುದುಮಾತ್ರವಲ್ಲ, ಪ್ರತ್ಯಕ್ಷ ಆರಾಧನೆಗೆ ಇದೊಂದೆ ಮಾರ್ಗ. ಸಾಧನೆಮಾಡಲಿ, ಹೋರಾಡಲಿ, ಸ್ಥೂಲವಸ್ತುಗಳನ್ನು ತ್ಯಜಿಸಿ, ಸೂಕ್ಷ್ಮಾಂಶವನ್ನು ಸ್ವೀಕರಿಸಲಿ, ಅಥವಾ ನಿನಗೆ ತಿಳಿದ ಯಾವ ಮಾರ್ಗದ ಮೂಲಕನಾಗಿ ಆಗಲಿ, ಎಲ್ಲಿಯವರೆಗೆ ನೀನು ಮಾನವರೊಂದಿಗೆ ನೀನೊಬ್ಬ ಮಾನವನಾಗಿರುವೆಯೊ ಅಲ್ಲಿಯವರೆಗೆ ನಿನ್ನ ಪ್ರಪಂಚ ಮಾನವಸಹಜ ವಾದುದು, ನಿನ್ನ ಧರ್ಮ ಮಾನವಸಹಜವಾದುದು, ನಿನ್ನ ದೇವರು ಮಾನವಸಹಜವಾದವನು. ಇದು ಅನ್ಯಥಾ ಇರಲಾರದು. ಒಂದು ಸ್ಥೂಲ ಮಧ್ಯವರ್ತಿ ಇಲ್ಲದೆ ಗ್ರಹಿಸಲಸಾಧ್ಯವಾದ ಕೇವಲ ಸೂಕ್ಷ್ಮ ಭಾವನೆಯನ್ನು ತ್ಯಜಿಸಿ ಎದುರಿಗಿರುವ ಅನುಷ್ಠಾನ ಯೋಗ್ಯವಾದ ವಾಸ್ತ ವಿಕ ವ್ಯಕ್ತಿಯನ್ನು ಯಾರುತಾನೆ ಸ್ವೀಕರಿಸುವುದಿಲ್ಲ? ಆದಕಾರಣವೆ

ಎಲ್ಲಾ ದೇಶಗಳಲ್ಲಿಯೂ ಎಲ್ಲ ಕಾಲಗಳಲ್ಲಿಯೂ ಭಗವಂತನ ಅವತಾರ ಗಳನ್ನು ಜನರು ಆರಾಧಿಸುವರು.

ಯಹೂದ್ಯರಲ್ಲಿ ಅವತಾರವಾದ ಏಸುಕ್ರಿಸ್ತನ ಜೀವನದ ಸ್ವಲ್ಪ ಭಾಗವನ್ನೀಗ ಅವಲೋಕಿಸುವೆವು. ಎರಡು ಏಳುಗಳ ಮಧ್ಯೆ ಇದ್ದ ಒಂದು ಬೀಳಿನಲ್ಲಿ ಯಹೂದ್ಯ ಜನಾಂಗವಿತ್ತು. ಆ ಸ್ಥಿತಿಯಲ್ಲಿ ಜನಾಂಗ ಮುಂದೆ ಹೋಗುವುದಕ್ಕೆ ತಾತ್ಕಾಲಿಕವಾಗಿ ಬೇಸತ್ತು ತನ್ನಲ್ಲಿರುವುದನ್ನು ಮಾತ್ರ ಸಂರಕ್ಷಿಸಿಕೊಳ್ಳುವುದರಲ್ಲಿ ಆಸಕ್ತವಾಗಿತ್ತು. ಜೀವನದ ಮುಖ್ಯ ಸಮಸ್ಯೆಗಳನ್ನು ಗಣನೆಗೆ ತರದ ಅನವಶ್ಯಕವಾದ ವಿವರಗಳ ಮೇಲೆ ಮಾತ್ರ ಅವರ ಲಕ್ಷ್ಯವಿತ್ತು, ಮುಂದೆ ಹೋಗುವುದಕ್ಕಿಂತ ಇದ್ದ ಸ್ಥಳ ದಲ್ಲಿಯೇ ಇರಲು ಯತ್ನಿಸುತ್ತಿತ್ತು. ಹೊಸ ಉದ್ಯಮದಲ್ಲಿ ನಿರತವಾಗದೆ ಹಿಂದಿನದನ್ನೆ ಅನುಭವಿಸುವ ಸ್ಥಿತಿಯಲ್ಲಿತ್ತು. ಇಂತಹ ಪರಿಸ್ಥಿತಿಯನ್ನು ನಾನು ದೂರುವುದಿಲ್ಲ. ಇದನ್ನು ನೀವು ಗಮನದಲ್ಲಿಡಬೇಕು. ಇದನ್ನು ದೂರುವುದಕ್ಕೆ ನಮಗೆ ಅಧಿಕಾರವಿಲ್ಲ. ಈ ಅವನತಿ ಇಲ್ಲದೆ ಇದ್ದರೆ ನಜರತ್ತಿನ ಜೀಸಸ್ಸಿನ ಅವತಾರಕ್ಕೆ ಅವಕಾಶವೆ ಇರುತ್ತಿರಲಿಲ್ಲ. ಫೆರಿಸಿಗಳು ಮತ್ತು ಸೆಡೂಸಿಗಳಲ್ಲಿ (ಯಹೂದಿಗಳಲ್ಲಿ ಎರಡು ಪಂಗಡ) ಶ್ರದ್ಧೆ ಇಲ್ಲದೆ ಇರಬಹುದು ಅವರು ಯಾವುದನ್ನು ಮಾಡಬಾರದೊ ಅದನ್ನು ಮಾಡುತ್ತಿರಬಹುದು. ಅವರು ಆಷಾಢಭೂತಿಗಳಾಗಿಯೂ ಇದ್ದಿರಬಹುದು ಅವರು ಏನಾದರೂ ಆಗಿರಲಿ, ಈ ಸ್ಥಿತಿಗಳೆ ದೇವದೂತನ ಅವತಾರಕ್ಕೆ ಕಾರಣವಾಗಿವೆ ಒಂದು ಕೊನೆಯಲ್ಲಿರುವ ದುರ್ಜನರು ಕಪಟಿಗಳೆ ಮತ್ತೊಂದು ಕಡೆ ಮಹಾಮಹಿಮನಾದಂಥಾ ಏಸೂಕ್ರಿಸ್ತ ಬರುವುದಕ್ಕೆ ಕಾರಣವಾಯಿತು.

ಧರ್ಮದ ದೈನಂದಿನ ವ್ಯವಹಾರ, ಪೂಜೆ, ಪುನಸ್ಕಾರ ಇವುಗಳನ್ನು ನೋಡಿ ಕೆಲವು ವೇಳೆ ನಾವು ನಗಬಹುದು. ಆದರೂ ಅವುಗಳ ಅಂತರಾಳ ದಲ್ಲಿ ಶಕ್ತಿ ಇದೆ ಹಲವು ವೇಳೆ ನಾವು ಮುಂದೆ ಧಾವಿಸುವುದರಿಂದ ಶಕ್ತಿಯನ್ನು ಕಳೆದುಕೊಳ್ಳುತ್ತೇವೆ ವಾಸ್ತವಿಕವಾಗಿ ಉದಾರಿಗಿಂತ ಮತಭ್ರಾಂತನಲ್ಲಿ ಹೆಚ್ಚು ಶಕ್ತಿ ಇದೆ. ಮತಭ್ರಾಂತನಲ್ಲಿಯೂ ಒಂದು ಒಳ್ಳೆಯ ಗುಣವಿದೆ ಒಂದು ಕಾಲದಲ್ಲಿ ಅದ್ಭುತಶಕ್ತಿಯನ್ನು ಸಂಗ್ರಹಿಸು ವನು. ವ್ಯಕ್ತಿಯಂತೆ ಜನಾಂಗದಲ್ಲಿ ಕೂಡ ಮುಂದಿನ ಉಪಯೋಗಕ್ಕೆ ಶಕ್ತಿಯನ್ನು ಸಂಚಯಿಸುವರು. ಸುತ್ತಲೂ ಬಾಹ್ಯವೈರಿಗಳಿಂದ ಸುತ್ತ

ಲ್ಪಟ್ಟು ರೋಮನ್ನರಿಂದ ಒಂದು ಕಡೆಗೆ ಒಯ್ಯಲ್ಪಟ್ಟರು. ಆಲೋಚನಾ ಕ್ಷೇತ್ರಗಳಲ್ಲಿ ಗ್ರೀಕರ ಸ್ವಭಾವಕ್ಕೆ ಮಣಿಯಬೇಕಾಯಿತು. ಪರ್ಷಿಯ ಇಂಡಿಯ ಅಲೆಕ್ಸಾಂಡ್ರಿಯ ಕಡೆಗಳಿಂದ ಬರುವ ಘಟನೆಗಳ ಪ್ರಭಾವಕ್ಕೆ ಒಳಗಾಗಬೇಕಾಯಿತು ಸುತ್ತಲೂ ಅನ್ಯ ದೈಹಿಕ ಮಾನಸಿಕ ನೈತಿಕ ನಿಯಮಗಳಿಂದ ಆವರಿಸಲ್ಪಟ್ಟಿತ್ತು. ಅನುವಂಶಿಕವಾಗಿ ಬಂದ ಪೂರ್ವಾಚಾರದ ಅದ್ಭುತಶಕ್ತಿಯೊದಿಗೆ ಆ ಯಹೂದಿ ಜನಾಂಗ ಇವೆಲ್ಲವನ್ನೂ ಎದುರಿಸಿ ನಿಂತಿತು. ಇಂದಿಗೂ ಈ ಶಕ್ತಿ ಅವರ ಅನುಯಾಯಿಗಳಲ್ಲಿ ನಾಶವಾಗಿಲ್ಲ ಆ ಜನಾಂಗ ತನ್ನ ಶಕ್ತಿಯನ್ನೆಲ್ಲಾ ಯಹೂದ್ಯಮತ ಮತ್ತು ಜೆರುಸಲೆಮ್ ನಗರಿಯ ಮೇಲೆ ಬಲಾತ್ಕಾರವಾಗಿ ಕೇಂದ್ರೀಕೃತ ಮಾಡಬೇಕಾಯಿತು. ಶಕ್ತಿಯನ್ನೆಲ್ಲಾ ಒಂದು ಕಡೆ ಸಂಗ್ರಹಿಸಿದರೆ ಅದು ಒಂದೇ ಕಡೆ ಬಹಳ ಕಾಲ ಇರಲಾರದು. ಅದು ಖರ್ಚಾಗಬೇಕು, ವಿಸ್ತಾರವಾಗಬೇಕು. ಯಾವ ಶಕ್ತಿಯನ್ನೂ ನಾವೊಂದು ಅಲ್ಪಕ್ಷೇತ್ರದಲ್ಲಿ ಬಹಳಕಾಲ ಕೂಡಿಡುವುದಕ್ಕೆ ಆಗುವುದಿಲ್ಲ.

ಯೆಹೂದ್ಯರಲ್ಲಿ ಕೇಂದ್ರೀಕೃತವಾದ ಈ ಶಕ್ತಿ ಅನಂತರ ಕ್ರೈಸ್ತ ಧರ್ಮೋದಯದಲ್ಲಿ ವ್ಯಕ್ತವಾಯಿತು ಹಲವು ಸಣ್ಣ ಗಿರಿ ಝರಿಗಳು ಸಂಗಮವಾದವು ಉಳಿದ ಪ್ರವಾಹಗಳೆಲ್ಲಾ ನಂತರ ಒಂದುಗೂಡಿ ಒಂದು ಮಹಾಪ್ರವಾಹವಾಯಿತು ಆ ಪ್ರವಾಹದ ಅಗ್ರಭಾಗದಲ್ಲಿ ನಜರತ್ತಿನ ಕ್ರಿಸ್ತನ ಶೀಲ ಮಂಡಿಸಿತ್ತು. ಪ್ರತಿಯೊಬ್ಬ ಮಹಾಪುರುಷನೂ ಅವನ ಕಾಲದ ಸೃಷ್ಟಿ. ಅವನ ಜನಾಂಗದ ಭೂತಕಾಲದ ಪರಿಣಾಮ. ಜೊತೆಗೆ ಅವನೆ ಭವಿಷ್ಯತ್ತನ್ನು ನಿರ್ಮಿಸುವನು ಹಿಂದಿನ ಕಾರಣ ಇಂದಿನ ಪರಿಣಾಮವಾಗಿದೆ, ಮುಂದಿನ ಭವಿಷ್ಯತ್ತಿಗೆ ಇಂದಿನವೇ ಕಾರಣ. ದೇವದೂತನು ಈ ಸ್ಥಿತಿಯಲ್ಲಿರುವನು. ಅವನ ಜನಾಂಗದಲ್ಲಿ ಶ್ರೇಷ್ಠತಮವಾಗಿರುವುದೆಲ್ಲ ಭವ್ಯವಾಗಿರುವುದೆಲ್ಲ ಈ ವ್ಯಕ್ತಿಯಲ್ಲಿ ವ್ಯಕ್ತವಾಗಿರುವುದು. ಹಲವು ಶತಮಾನಗಳಿಂದ ಯಾವ ಒಂದು ಉದ್ದೇಶಕ್ಕೋಸುಗ ಆ ಜನಾಂಗ ಹೋರಾಡಿದೆಯೊ ಆ ಆದರ್ಶವೆಲ್ಲಾ ಆ ವ್ಯಕ್ತಿಯಲ್ಲಿ ಅಂತರ್ಗತವಾಗಿದೆ. ಆ ವ್ಯಕ್ತಿಯೆ ಭವಿಷ್ಯ ನಿರ್ಮಾಪಕ, ತನ್ನ ಜನಾಂಗ ಒಂದರ ಭವಿಷ್ಯ ಮಾತ್ರವಲ್ಲ, ಪ್ರಪಂಚದ ಹಲವು ಜನಾಂಗಗಳ ಭವಿಷ್ಯಕ್ಕೂ ಕಾರಣನಾಗುವನು

ನಾವು ಮತ್ತೊಂದು ವಿಷಯವನ್ನು ಗಮನಿಸಬೇಕಾಗಿದೆ. ನಾನು

ನಜರತ್ತಿನ ಮಹಾ ದೇವದೂತನನ್ನು ನೋಡುವುದು ಪೌರ್ವಾತ್ಯರೀತಿ. ಅನೇಕವೇಳೆ ಕ್ರಿಸ್ತ ಪೌರ್ವಾತ್ಯರಲ್ಲಿ ಪೌರ್ವಾತ್ಯ ಎಂಬುದನ್ನು ಮರೆಯುವಿರಿ. ನೀವು ಅವನನ್ನು ನೀಲಿಕಣ್ಣಿನ ಹಳದಿಕೂದಲಿನಿಂದ ಕಲ್ಪಿಸಿಕೊಳ್ಳುವುದಕ್ಕೆ ಎಷ್ಟುಪ್ರಯತ್ನಪಟ್ಟರೂ ಕ್ರಿಸ್ತ ಶುದ್ಧ ಪೌರ್ವಾತ್ಯನಾಗಿದ್ದ. ಬೈಬಲಿನಲ್ಲಿ ಬರುವ ಉಪಮಾನ ಕಲ್ಪನೆಗಳೆಲ್ಲಾ ಅಲ್ಲಿಯ ದೃಶ್ಯಗಳು. ಆ ಸ್ಥಳ ಅವರ ನಡೆನುಡಿ ಜನಸಮೂಹ ಅವರ ಕಾರ್ಯಚಿಹ್ನೆ ಎಲ್ಲಾ ಪೌರ್ವಾತ್ಯ ದೇಶವನ್ನು ಕುರಿತದ್ದು. ಅಲ್ಲಿಯ ತಿಳಿಆಗಸ ಉರಿಬೇಸಿಗೆ ಸೂರ್ಯ ಮರುಭೂಮಿ ಅಲ್ಲಿಬರುವ ಬಾಯಾರಿದ ಮನುಷ್ಯರು ಪ್ರಾಣಿಗಳು ನೀರಿಗಾಗಿ ಕೊಡ ತೆಗೆದುಕೊಂಡು ಬರುವ ನರನಾರಿಯರು ಕುರಿಯ ಮಂದೆ ರೈತರು ಸುತ್ತಲೂ ನಡೆಯುತ್ತಿರುವ ಬೇಸಾಯ ನೀರಿನಭಾವಿ ಅದನ್ನು ಎತ್ತುವ ಯಂತ್ರ ಚಕ್ರ ಬೀಸುವಕಲ್ಲು ಇವನ್ನೆಲ್ಲ ಏಷ್ಯಾಖಂಡದಲ್ಲಿಂದು ನೋಡಬಹುದು.

ಏಷ್ಯಾಖಂಡದ ವಾಣಿ ಧರ್ಮವಾಣಿ, ಯೂರೋಪಿನ ವಾಣಿ ರಾಜಕೀಯವಾಣಿ. ಪ್ರತಿಯೊಂದೂ ಅದರ ಸ್ಥಾನದಲ್ಲಿ ದೊಡ್ಡದೆ. ಯೂರೋಪಿನ ವಾಣಿ ಪುರಾತನ ಗ್ರೀಕರ ವಾಣಿ. ಗ್ರೀಕರ ಮನಸ್ಸಿಗೆ ತಮ್ಮ ಮುಂದಿರುವ ಸಮಾಜವೇ ಸರ್ವಸ್ವವಾಗಿತ್ತು. ಅದರಾಚೆ ಉಳಿದುದೆಲ್ಲವೂ ಅನಾಗರೀಕ. ಗ್ರೀಕರಲ್ಲದ ಇತರರು ಬಾಳುವುದಕ್ಕೆ ಅಧಿಕಾರವಿಲ್ಲ. ಯಾವುದನ್ನು ಗ್ರೀಕರು ಮಾಡುತ್ತಾರೆಯೊ ಅದೇ ಸರಿ ಧರ್ಮ. ಪ್ರಪಂಚದಲ್ಲಿ ಇರುವ ಉಳಿದುದೆಲ್ಲ ಧರ್ಮವೂ ಅಲ್ಲ, ಸರಿಯೂ ಅಲ್ಲ ಮತ್ತು ಅದರ ಉಳಿಗಾಲಕ್ಕೆ ಅವಕಾಶವನ್ನೂ ಕೊಡಕೂಡದು. ಆದಕಾರಣವೆ ಗ್ರೀಕರ ಸಹಾನುಭೂತಿ ಮಾನವ ಸಹಜವಾಗಿದೆ, ಸ್ವಾಭಾವಿಕವಾಗಿ ಕಲಾಪೂರ್ಣವಾಗಿದೆ. ಗ್ರೀಕರು ಈ ಪ್ರಪಂಚದಲ್ಲಿ ಮಾತ್ರ ವಿಹರಿಸುವರು. ಕನಸುಣಿಯಾಗಲಿಚ್ಛಿಸುವುದಿಲ್ಲ. ಅವರ ಕಾವ್ಯ ಕೂಡ ವ್ಯವಹಾರ ಪ್ರಧಾನವಾದುದು. ಅವರ ದೇವದೇವತೆಗಳು ಮಾನವರು ಮಾತ್ರವಲ್ಲ ತೀವ್ರ ಮಾನವೀಯಭಾವನೆ ಅವರಲ್ಲಿದೆ; ನಮ್ಮಲ್ಲಿರುವಂತೆಯೆ ಕೋಪತಾಪಗಳ ಭಾವನೆಯಿಂದ ತುಂಬಿತುಳುಕಾಡುತ್ತಿರುವರು. ಸುಂದರವಾಗಿರುವುದನ್ನು ಅವನು ಪ್ರೀತಿಸುವನು. ಆದರೆ ಇದನ್ನು ನೆನಪಿನಲ್ಲಿಡಿ. ಅದಾವಾಗಲೂ ಬಾಹ್ಯಸೌಂದರ್ಯ, ಪರ್ವತ ಹಿಮ ಹೂವು ಆಕಾರ ಮತ್ತು ರೂಪುರಚನೆಯ ಸೌಂದರ್ಯ, ಮಾನವ ವರ್ಗದ ಸೌಂದರ್ಯ—

ಅನೇಕ ವೇಳೆ ಅವನ ಶರೀರ ಸೌಂದರ್ಯ ಇವನ್ನೇ ಗ್ರೀಕರು ಪ್ರೀತಿಸುತ್ತಿದ್ದುದು. ಗ್ರೀಕರು ಅನಂತರ ಬಂದ ಐರೋಪ್ಯರಿಗೆಲ್ಲಾ ಗುರುಗಳಾಗಿದ್ದುದರಿಂದ ಯೂರೋಪಿನ ವಾಣಿ ಗ್ರೀಕ್ ವಾಣಿಯಾಗಿದೆ.

ಏಷ್ಯಾಖಂಡದಲ್ಲಿ ಮತ್ತೊಂದು ಮಾದರಿಯುದಿವೆ. ಆ ವಿಶಾಲವಾದ ಏಷ್ಯಾಖಂಡವನ್ನು ಆಲೋಚಿಸಿ ನೋಡಿ ಅವುಗಳ ಗಿರಿಶಿಖರಗಳು ಮುಗಿಲನ್ನು ತೂರಿಹೋಗಿ ನೀಲಗಗನತಳವನ್ನು ತಾಕುವಂತಿದೆ. ಕುಡಿಯುವುದಕ್ಕೆ ಒಂದು ತೊಟ್ಟು ನೀರು ದೊರಕದ ಒಂದು ಹುಲ್ಲಿನೆಳೆ ಕೂಡ ಬೆಳೆಯಲಾರದ ಮೈಲಿಮೈಲಿಗಳು ವಿಸ್ತಾರವಾಗಿ ಹಬ್ಬಿರುವ ಅಲ್ಲಿಯ ಮರಳು ಕಾಡುಗಳು, ಅಭೇದ್ಯವಾದ ದಟ್ಟ ಅರಣ್ಯ, ಸಮುದ್ರದೆಡೆ ಧಾವಿಸುತ್ತಿರುವ ಭೀಮನದಿಗಳಿವೆ ಇಂತಹ ವಾತಾವರಣದಲ್ಲಿ ಪೌರಾತ್ಯನ ಭೌವ್ಯಪೌದ್ಯಪಿಪಾಸೆ ಮತ್ತೊಂದು ದಿಕ್ಕಿನಲ್ಲಿ ವಿಕಾಸವಾಯಿತು. ಅದು ಅಂತರ್ಮುಖವಾಯಿತು. ಬಾಹ್ಯಮುಖವಾಗಲಿಲ್ಲ ಅಲ್ಲಿಯೂ ಬಾಹ್ಯವಸ್ತುವನ್ನು ತಿಳಿದ ಕೊಳ್ಳಬೇಕು, ಶಕ್ತಿಯನ್ನು ಪಡೆಯಬೇಕು, ಸುಂದರವಾದುದಕ್ಕೆ ಮನಸೋಲುವುದು ಮುಂತಾದ ಗ್ರೀಕ್ ಮತ್ತು ಅನಾರ್ಯಭಾವನೆಗಳವೆ ಆದರೆ ಇದು ಸಣ್ಣ ಕ್ಷೇತ್ರಗಳನ್ನೆಲ್ಲಾ ಮೀರಿ ಹೋಗಿದೆ ಏಷ್ಯಾಖಂಡದಲ್ಲಿ ಈಗಲೂ ಕೂಡ ಜನ್ಮ ಬಣ್ಣ ಭಾಷೆಯಿಂದಲೇ ಒಂದು ಜನಾಂಗವಾಗುವುದಿಲ್ಲ ಜನಾಂಗವನ್ನಾಗಿ ಮಾಡುವುದು ಧರ್ಮ. ನಾವೆಲ್ಲ ಕ್ರೈಸ್ತರು, ಮಹಮ್ಮದೀಯರು, ಹಿಂದೂಗಳು ಇಲ್ಲವೇ ಬೌದ್ಧರು. ಬೌದ್ಧರು ಚೈನಾದೇಶಕ್ಕೆ ಸೇರಿರಲಿ ಅಥವಾ ಪರ್ಷಿಯಾ ದೇಶಕ್ಕೆ ಸೇರಿರಲಿ ಅವರೆಲ್ಲಾ ತಾವು ಸಹೋದರರೆಂದು ಭಾವಿಸುವರು. ಏಕೆಂದರೆ ಎಲ್ಲರೂ ಒಂದೆ ಧರ್ಮಕ್ಕೆ ಸೇರಿದವರು. ಧರ್ಮವೆ ಮಾನವ ಕೋಟಿಯನ್ನು ಒಂದುಗೂಡಿಸುವುದು ಇದೇ ಕಾರಣದಿಂದ ಪೌರಾತ್ಯನು ಹುಟ್ಟು ಕನಸುಣಿ ಜಲಪಾತ, ವಿಕಗದಿ. ಚರ. ಸೂರ್ಯ, ಚಂದ್ರ, ತಾರೆ ಇಡೀ ಪೃಥ್ವಿಯೆಲ್ಲ ಸುಂದರವಾಗೇನೊ ಇದೆ ಆದರೆ ಪೌರಾತ್ಯನಿಗೆ ಇಷ್ಟೇ ಸಾಲದು. ಇದನ್ನು ಮೀರಿರುವುದನ್ನು ಕನಸು ಕಟ್ಟಲು ಹವಣಿಸುವನು ವರ್ತಮಾನಕಾಲವನ್ನು ಅತಿಕ್ರಮಿಸಲೆತ್ನಿಸುವನು ವರ್ತಮಾನ ಕಾಲಕ್ಕೆ ಅವನು ಬೆಲೆಯನ್ನೇ ಕೊಡುವದಿಲ್ಲ ಯುಗಯುಗಾಂತರಗಳಿಂದಲೂ ಮಾನವಜನಾಂಗದ ತೊಟ್ಟಿಲಾಗಿರುವುದು ಪೌರಾತ್ಯ. ಎಷ್ಟೋ, ಸುಖದುಃಖಗಳನ್ನು ಅನುಭವಿಸಿರುವುದು. ದೇಶಗಳಾದ ಮೇಲೆ ದೇಶ

ಗಳು. ಚಕ್ರಾಧಿಪತ್ಯಗಳಾದ ಮೇಲೆ ಚಕ್ರಾಧಿಪತ್ಯಗಳು, ಮಾನವನಶಕ್ತಿ ಸಾಮರ್ಥ್ಯ ಐಶ್ವರ್ಯಗಳೆಲ್ಲಾ ಇವೆ ಇಲ್ಲಿ. ಐಶ್ವರ್ಯ ಮತ್ತು ಅಧಿಕಾರದ ಮಹಾಪ್ರದರ್ಶನವಿಲ್ಲಿದೆ. ರಾಜ್ಯ, ಅಧಿಕಾರ, ಪಾಂಡಿತ್ಯದ ಅದ್ಭುತ ಪ್ರದರ್ಶನವೇ ಪೌರಾತ್ಯ ಪೌರಾತ್ಯನ ದೃಷ್ಟಿ ಪ್ರಪಂಚದ ಕ್ಷಣಿಕ ವಸ್ತುಗಳನು ನಿಕೃಷ್ಟದೃಷ್ಟಿಯಿಂದ ನೋಡಿ, ಯಾವುದು ಒದಲಾಯಿಸುವುದಿಲ್ಲವೊ, ಯಾವುದು ಸಾಯುವುದಿಲ್ಲವೋ, ಮೃತ್ಯು ಮತ್ತು ದುಃಖ ಮಯಜಗತ್ತಿನಲ್ಲಿ ಯಾವುದು ಅನಂತವಮಯವಾಗಿರುವುದೊ ಆನಂದ ಮಯವಾಗಿರುವುದೊ ಅಮೃತಮಯವಾಗಿರುವುದೊ ಅದನ್ನು ಇಚ್ಛಿಸುವುದರಲ್ಲಿ ಆಶ್ಚರ್ಯವೇನಿಲ್ಲ ಈ ಆದರ್ಶಗಳನ್ನು ಪುನಃ ಪುನಃ ಒತ್ತಿ ಒತ್ತಿ ಹೇಳುವುದಕ್ಕೆ ಯಾವ ಪೌರಾತ್ಯ ಮಹಾತ್ಮನಿಗೂ ಬೇಜಾರಿಲ್ಲ ವಿನಾಯತಿ ಇಲ್ಲದೆ ಎಲ್ಲಾ ಮಹಾತ್ಮರೂ ದೇವದೂತರೂ ಪೌರಾತ್ಯದೇಶದಿಂದ ಬಂದವರು.

ಈ ಮಹಾ ದೇವದೂತನ ಸಂದೇಶದಲ್ಲಿ ನಾವು ಮೊದಲು "ಈ ಪ್ರಪಂಚವಲ್ಲ ಗುರಿ, ಇದನ್ನು ಮೀರಿರುವುದು" ಎಂಬ ಉಪದೇಶದ ಪಲ್ಲವಿಯನ್ನು ನೋಡುವೆವು. ನಿಜವಾದ ಪೌರಾತ್ಯನ ಸಂತತಿಗೆ ಸೇರಿದವನಂತೆ ಇವನು ಈ ಕಾರ ಕ್ಷೇತ್ರದಲ್ಲಿ ಚತುರ. ಪಾಶ್ಚಾತ್ಯರಾದ ನೀವು ಕೂಡ ಸೇನಾವ್ಯವಹಾರದಲ್ಲಿ ರಾಜಕೀಯ ಕ್ಷೇತ್ರ ಮುಂತಾದುವುಗಳಲ್ಲಿ ವ್ಯವಹಾರ ನಿಪುಣರು ಪೌರಾತ್ಯನು ಇತರ ಕಾರ್ಯಕ್ಷೇತ್ರದಲ್ಲಿ ಚತುರನಲ್ಲದಿರಬಹುದು. ಆದರೆ ಅವನು ತನ್ನ ಕಾರ್ಯಕ್ಷೇತ್ರದಲ್ಲಿ, ಧರ್ಮದಲ್ಲಿ ವ್ಯವಹಾರ ಚತುರ ಒಬ್ಬ ಇಂದು ಯಾವುದಾದರೂ ತತ್ತ್ವವನ್ನು ಉಪದೇಶಿಸಿದರೆ ಇವನ್ನು ತಮ್ಮ ಜೀವನದಲ್ಲಿ ಅನುಷ್ಠಾನಕ್ಕೆ ತರಲು ಯತ್ನಿಸುವ ನೂರಾರು ಜನರು ದೊರಕುವರು ಒಂದು ಕಾಲವೇಲೆ ನಿಂತರೆ ಮುಕ್ತಿ ಸಿಕ್ಕುವುದೆಂದು ಸಾರಿದರೆ ಹಾಗೆ ಮಾಡುವುದಕ್ಕೆ ಐದುನೂರು ಜನ ತಕ್ಷಣ ದೊರಕುವರು ನೀವು ಇದನ್ನು ವಿಲಕ್ಷಣ ಎನ್ನಬಹುದು ಆದರೆ ಅದರ ಹಿಂದೆ ಅವರ ತತ್ತ್ವ, ವ್ಯವಹಾರಚತುರತೆ ಇವೆ ಪಾಶ್ಚಾತ್ಯರಲ್ಲಿ ಮುಕ್ತಿಯ ಯೋಚನೆಗಳೆಂದರೆ ಕೆಲವು ಬುದ್ಧಿವಂತಿಕೆಯ ಕಸರತ್ತು ಮಾತ್ರ ಕಾರ್ಯಕಾರಿಯಾಗದ ಎಂದಿಗೂ ಅನುಷ್ಠಾನಕ್ಕೆ ಬರದ ಕೆಲವು ಯೋಜನೆಗಳು ಅಷ್ಟೆ. ಪಾಶ್ಚಾತ್ಯರಲ್ಲಿ ಯಾರು ಸುಂದರ ವಾಗ್ಮಿಗಳೊ ಅವರೆ ಶ್ರೇಷ್ಠ ಉಪದೇಶಕರು.

ಏಸು ಪ್ರಥಮತಃ ನಿಜವಾದ ಪೌರಾತ್ಯ ಸಂತಾನವಾಗಿದ್ದ, ಧರ್ಮ ಪ್ರಪಂಚದಲ್ಲಿ ಅನುಷ್ಠಾನಪುರನಾಗಿದ್ದ ಎಂಬುದನ್ನು ನೋಡುವೆವು. ಈ ಕ್ಷಣಿಕ ಪ್ರಪಂಚ ಮತ್ತು ಅದಕ್ಕೆ ಸೇರಿದ ವಸ್ತುಗಳ ಮೇಲೆ ಅವನಿಗೆ ನಂಬಿಕೆ ಇರಲಿಲ್ಲ. ಆಧುನಿಕ ಕಾಲದಲ್ಲಿ ಪ್ರಾಚ್ಯರಲ್ಲಿರುವಂತೆ ಶಾಸ್ತ್ರಪೀಡನೆ ಆವಶ್ಯಕತೆ ಇರಲಿಲ್ಲ. ಸುಮ್ಮನೆ ಶಾಸ್ತ್ರಗಳನ್ನು ಎಲ್ಲಿಯವರೆಗೆ ಸಾಧ್ಯವೊ ಅಲ್ಲಿಯವರೆಗೆ ಅವನ್ನು ಎಳೆದಾಡಬೇಕಾಗಿಲ್ಲ. ಶಾಸ್ತ್ರಗಳು ಇಂಡಿಯಾ ರಬ್ಬರಿನಂತೆ ಅಲ್ಲ ಆ ರಬ್ಬರಿಗೂ ಒಂದು ಮಿತಿ ಇದೆ ಆಧುನಿಕ ಕಾಲದ ಇಂದ್ರಿಯ ತೃಪ್ತಿಗೆ ಧರ್ಮ ಸಾಧಕವಾಗಬೇಕಾಗಿಲ್ಲ! ಇದನ್ನು ಗಮನಿಸಿ ನಾವೆಲ್ಲ ಸತ್ಯನಿಷ್ಠರಾಗಿರುವ ಒಂದು ಆದರ್ಶವನ್ನು ಅನುಸರಿಸಲು ನಮಗೆ ಸಾಧ್ಯವಿಲ್ಲದೆ ಇದ್ದರೆ ನಮ್ಮ ದುರ್ಬಲತೆಯನ್ನು ಒಪ್ಪಿಕೊಳ್ಳೋಣ. ಆದರ್ಶವನ್ನು ಅಧೋಗತಿಗೆ ಎಳೆಯಲು ಯತ್ನಿಸದೆ ಇರೋಣ ಪಾಶ್ಚಾತ್ಯರು ಕೊಡುವ ಕ್ರಿಸ್ತ ಜೀವನದ ವರದಿ ನೋಡಿ ಜಿಗುಪ್ಸೆಯಾಗುವುದು ಅವನು ಏನಾಗಿದ್ದನೊ ಏನಾಗಿರಲಿಲ್ಲವೊ ನನಗೆ ತಿಳಿಯದು! ಒಬ್ಬ ಅವನನ್ನು ರಾಜಕಾರಣಪಟುವನ್ನಾಗಿ ಮಾಡುವನು; ಮತ್ತೊಬ್ಬ ಅವನನ್ನು ವೀರ ಯೋಧನನ್ನಾಗಿ ಮಾಡುವನು. ಮಗುದೊಬ್ಬ ಅವನನು ದೇಶಭಕ್ತ ಯಹೂದನನ್ನಾಗಿ ಮಾಡುವನು, ಇತ್ಯಾದಿ. ಇಂತಹ ಊಹೆಗೆಲ್ಲ ಶಾಸ್ತ್ರದಲ್ಲಿ ಏನಾದರೂ ಆಧಾರವಿದೆಯೆ? ಒಬ್ಬ ಮಹಾ ವ್ಯಕ್ತಿಯ ಜೀವನದ ಮೇಲೆ ಅವನ ಜೀವನವೇ ಶ್ರೇಷ್ಠ ಭಾಷ್ಯ. "ನರಿಗಳಿಗೆ ಬಿಲಗಳಿವೆ ಆಗಸದ ಹಕ್ಕಿಗಳಿಗೆ ಗೂಡುಗಳಿವೆ ಆದರೆ ಮಾನವ ಸಂತಾನಕ್ಕೆ ಕೂಡಲೆಡೆಯಿಲ್ಲ." ಮುಕ್ತಿಗೆ ಇದೊಂದೇ ಮಾರ್ಗ ಎಂದು ಏಸು ಸಾರುವನು. ಮತ್ತಾವ ಮಾರ್ಗವನ್ನೂ ತೋರುವುದಿಲ್ಲ. ಇದು ನಮಗೆ ಸಾಧ್ಯವಿಲ್ಲ ಎಂದು ನಿರ್ವಂಚನೆಯಿಂದ ಒಪ್ಪಿಕೊಳ್ಳೋಣ. ನಮಗೆಲ್ಲ ನಾನು ನನ್ನದು ಎಂಬ ಅಭಿಮಾನ ಇನ್ನೂ ಇದೆ. ನಮಗೆಲ್ಲಾ ಆಸ್ತಿ ಐಶ್ವರ್ಯ ದ್ರವ್ಯ ಬೇಕು. ಧಿಃಕಾರ ನಮಗೆ! ಇದನ್ನು ನಾವು ಒಪ್ಪಿಕೊಳ್ಳೋಣ ಮಾನವಕೋಟಿಯ ಶ್ರೇಷ್ಠ ಗುರುವಿಗೆ ಅಪವಾದ ತಾರದಿರುವ. ಅವನಿಗೆ ಯಾವ ಸಂಸಾರ ಬಂಧನವೂ ಇರಲಿಲ್ಲ. ಅವನಲ್ಲಿ ಯಾವುದಾದರೂ ದೈಹಿಕ ಭಾವನೆ ಉದಿಸಿತ್ತು ಎಂದು ಭಾವಿಸುವಿರೇನು? ಈ ಜ್ಞಾನಿ ಮಾನವನಲ್ಲ ದೇವ! ಮೃಗಗಳೊಂದಿಗೆ ಇರುವುದಕ್ಕೆ ಬಂದನೆಂದು ಊಹಿಸುವಿರೇನು? ಆದರೂ ಜನ ಎಷ್ಟೋ ವಿಷಯಗಳನ್ನು

ಅವನ ಬಾಯಿಂದ ಬಂದಿತೆಂದು ಹೇಳುವರು ಅವನಿಗೆ ಲಿಂಗಭಾವನೆ ಇರಲಿಲ್ಲ ಆತ್ಮವಾಗಿದ್ದನು. ಅದಲ್ಲದೆ ಬೇರೆ ಅಲ್ಲ. ಮಾನವ ಕಲ್ಯಾಣಕ್ಕೆ ದೇಹದ ಮೂಲಕ ಕೆಲಸಮಾಡುತ್ತಿದ್ದನು. ಅಷ್ಟೆ ದೇಹಕ್ಕೂ ಅವನಿಗೂ ಇದ್ದ ಸಂಬಂಧ ಇಷ್ಟೆ ಆತ್ಮನಲ್ಲಿ ಲಿಂಗಭೇದವಿಲ್ಲ ಮುಕ್ತಾತ್ಮನಿಗೆ ದೇಹದೊಂದಿಗೆ ಸಂಬಂಧವಿಲ್ಲ ಜಗದೊಂದಿಗೆ ಸಂಬಂಧವಿಲ್ಲ. ಆದರ್ಶ ಬಹಳ ದೂರದಲ್ಲಿರಬಹುದು ನಮ್ಮನ್ನು ಮೀರಿರಬಹುದು ಚಿಂತೆಯಿಲ್ಲ. ಆದರ್ಶವನ್ನು ಯಾವಾಗಲೂ ಮರೆಯಬೇಡಿ. ಅದು ನಮ್ಮ ಆದರ್ಶ. ಆದರೆ ನಾವು ಅದನ್ನು ಇನ್ನೂ ಸೇರಲಾರೆವು ಎಂದು ಒಪ್ಪಿಕೊಳ್ಳೋಣ

ಅವನೊಬ್ಬ ಆತ್ಮನೆಂಬ ಭಾವನೆಯಲ್ಲದೆ ಬೇರಾವ ಯೋಚನೆಯೂ ಇರಲಿಲ್ಲ, ಬೇರಾವ ಕಾರ್ಯವೂ ಇರಲಿಲ್ಲ ಅವನು ದೇಹಾತೀತನಾದ, ಬಂಧನರಹಿತನಾದ ಮುಕ್ತಾತ್ಮ. ಇಷ್ಟು ಮಾತ್ರ ಅಲ್ಲ ತನ್ನ ಅಪೂರ್ವ ಅನುಭವದಿಂದ ಪ್ರತಿಯೊಬ್ಬ ಸ್ತ್ರೀ ಪುರುಷರು, ಯಹೂದ್ಯನಾಗಲಿ ಅಲ್ಲದಿರಲಿ ಶ್ರೀಮಂತನಾಗಲಿ ದೀನನಾಗಲಿ ಪಾಪಿಯಾಗಲಿ ಪುಣ್ಯಾತ್ಮನಾಗಲಿ ಎಲ್ಲರೂ ತನ್ನಂತೆಯೆ ಚ್ಯುತಿ ಇಲ್ಲದ ಆತ್ಮದ ಆವಿರ್ಭಾವನೆ ಎಂಬುದನ್ನು ಅರಿತಿದ್ದನು ಅವನ ಜೀವನದ ಏಕಮಾತ್ರ ಉದ್ದೇಶವೆ ಇತರರೂ ತಮ್ಮ ಆಧ್ಯಾತ್ಮಿಕಸ್ವಭಾವವನ್ನು ತಿಳಿದುಕೊಳ್ಳುವಂತೆ ಮಾಡುವುದು. ನೀವು ದೀನರು ದರಿದ್ರರು ಎಂಬ ಕೆಲಸಕ್ಕೆ ಬಾರದ ಸ್ವಪ್ನವನ್ನು ತ್ಯಜಿಸಿ ಎನ್ನುವನು. ಗುಲಾಮರೆಂದು ನಿಮ್ಮನ್ನು ತಿಳಿಯುತ್ತಿರುವರು, ನಿಮ್ಮ ಅಸುವನ್ನು ಹೀರುತ್ತಿರುವರು ಎಂದು ಭಾವಿಸಬೇಡಿ ನಿಮ್ಮಲ್ಲಿರುವುದನ್ನು ಯಾವುದೂ ತುಳಿಯಲಾರದು, ಯಾವುದೂ ನಾಶ ಮಾಡಲಾರದು ಅದಕ್ಕೆ ತೊಂದರೆ ಕೊಡಲಾರದು, ಯಾವುದೂ ಅದನ್ನು ನಾಶಮಾಡಲಾರದು ನೀವೆಲ್ಲ ಭಗವಂತನ ಮಕ್ಕಳು, ಅಮೃತಾತ್ಮರು, "ಪರಂಧಾಮ ನಿಮ್ಮಲ್ಲಿಯೆ ಇದೆ" ಎನ್ನುವನು ಧೈರ್ಯವಾಗಿ ಎದ್ದುನಿಂತು "ನಾನು ಭಗವಂತನ ಸಂತಾನ ಮಾತ್ರವಲ್ಲ; ನಾನು ನನ್ನ ತಂದೆ ಇಬ್ಬರೂ ಒಂದೆ" ಎಂದು ಹೇಳಿ. ನಜರತ್ತಿನ ಜೀಸಸ್ ಸಾರಿದ್ದು ಇದನ್ನು. ಈ ಪ್ರಪಂಚ ಮತ್ತು ಈ ಜೀವನವನ್ನು ಕುರಿತು ಮಾತನಾಡುವುದೆ ಇಲ್ಲ. ಪ್ರಪಂಚದಿಂದ ಏನನ್ನೂ ನಿರೀಕ್ಷಿಸುವುದಿಲ್ಲ ಪ್ರಪಂಚವನ್ನು ಈಗಿರುವ ಸ್ಥಿತಿಯಿಂದ ತೆಗೆದುಕೊಂಡು ಅದನ್ನು ತಳ್ಳಿ ಪೃಥ್ವಿಯೆಲ್ಲ ಆ ಭಗವಂತನ ಜ್ಯೋತಿಯಿಂದ ಆಚ್ಛಾದಿತವಾಗಿ ಪ್ರತಿಯೊಬ್ಬರೂ ತಮ್ಮ ಆಧ್ಯಾತ್ಮಿಕ

ಸ್ವಭಾವವನ್ನು ಅರಿತು ಮರಣಶೋಕಗಳು ಸಂಪೂರ್ಣ ಪ್ರಪಂಚದಿಂದ ಕಣ್ಮರೆಯಾಗುವವರೆಗೆ ಮುಂದೆ ಮುಂದಕ್ಕೆ ನೂಕುವನು

ಅವನ ವಿಷಯವಾಗಿ ಒರೆದ ಹಲವು ಕಥೆಗಳನ್ನು ನಾವು ಓದಿರುವೆವು ಪಂಡಿತರು ಅವರ ಬರಹ ಅವರ ಉತ್ತಮ ವಿಮರ್ಶೆಗಳು ಮತ್ತು ಅಧ್ಯಯನದಿಂದ ಆಗುವುದೆಲ್ಲವನ್ನೂ ನಾವು ತಿಳಿದುಕೊಂಡಿರುವೆವು ನ್ಯೂ ಟೆಸ್ಟಮೆಂಟಿನಲ್ಲಿ ಇರುವುದು ಎಷ್ಟು ಸತ್ಯ, ಅವನ ಜೀವನದಲ್ಲಿ ಎಷ್ಟು ಚಾರಿತ್ರಿಕದೃಷ್ಟಿಯಿಂದ ಸರಿ ಎಂಬುದನ್ನು ನಾನೀಗ ವಿಮರ್ಶಿಸುವುದಿಲ್ಲ. ಕ್ರಿಸ್ತ ಹುಟ್ಟಿದ ಐದುನೂರು ವರುಷಗಳವರೆಗೆ ಅದನ್ನು ಒರೆದರೆ ಅಥವಾ ಅವನ ಜೀವನದಲ್ಲಿ ಎಷ್ಟು ಸತ್ಯ ಈ ಅಂಶಗಳಾವುವೂ ಬೇಕಿಲ್ಲ. ಆದರೆ ಇವುಗಳ ಹಿಂದೆಲ್ಲ ನಾವು ಅನುಕರಿಸಬಹುದಾದುದೊಂದು ಇದೆ ನಾವು ಸುಳ್ಳನ್ನು ಹೇಳಬೇಕಾದರೆ ವಸ್ತು ಒಂದನ್ನು ಅನುಕರಿಸಬೇಕು. ವಸ್ತು ಸತ್ಯ. ಎಂದಿಗೂ ಇಲ್ಲದ ವಸ್ತುವನ್ನು ಯಾರೂ ಅನುಕರಿಸಲಾರರು. ಪ್ರಪಂಚದಲ್ಲಿ ಅವತರಿಸಿದ ಒಂದು ಅದ್ಭುತ ಆಧ್ಯಾತ್ಮಿಕ ಶಕ್ತಿಯು ಆವಿರ್ಭಾವದ ಒಂದು ಕೇಂದ್ರ ಇದ್ದೇ ಇರಬೇಕಾಗಿತ್ತು ನಾವೀಗ ಆ ವಿಷಯವನ್ನು ಕುರಿತು ಮಾತನಾಡುತ್ತಿರುವೆವು. ಅದು ಅಲ್ಲಿರುವುದು. ನಾವು ಪಂಡಿತರ ವಿಮರ್ಶೆಗೆ ಅಂಜಬೇಕಾಗಿಲ್ಲ. ನಾನು ಪೌರಾತ್ಯನಂತೆ ಏಸುಕ್ರಿಸ್ತನನ್ನು ಆರಾಧಿಸಬೇಕಾದರೆ ನನಗೆ ಇರುವುದೊಂದೆ ಮಾರ್ಗ. ಅದೇ ಅವನನ್ನು ದೇವರಂತೆ ಮಾತ್ರ ಪೂಜಿಸಲು ಸಾಧ್ಯ. ಬೇಕಿಲ್ಲ, ಆ ರೀತಿ ಅವನನ್ನು ಪೂಜಿಸಲು ಅಧಿಕಾರವಿಲ್ಲ ಎಂದು ಹೇಳುತ್ತೀರೇನು ? ನಮ್ಮ ಮಟ್ಟಕ್ಕೆ ಅವನನ್ನು ಎಳೆತಂದು-ಅವನೊಬ್ಬ ಮಹಾಪುರುಷನೆಂದು ಗೌರವ ತೋರಿದರೆ ಸಾಲದೆ? ಏತಕ್ಕೆ ಪೂಜಿಸಬೇಕು ? ನಮ್ಮ ಶಾಸ್ತ್ರ ಹೀಗೆ ಸಾರುವುದು : "ಈ ಪರಂಜ್ಯೋತಿಯ ಸಂತಾನರು ತಾವೆ ಆ ಜ್ಯೋತಿಯನ್ನು ವ್ಯಕ್ತಗೊಳಿಸುತ್ತಿರುವರು, ತಾವೇ ಆ ಜ್ಯೋತಿಯಾಗಿರುವರು ನಾವು ಅವರನ್ನು ಆರಾಧಿಸಿದರೆ ಅವರು ನಮ್ಮೊಡನೆ ಐಕ್ಯವಾಗುವರು ನಾವು ಅವರೊಡನೆ ಐಕ್ಯರಾಗುವೆವು."

ಮಾನವ ದೇವರನ್ನು ಮೂರು ರೀತಿ ಭಾವಿಸುವನೆಂಬುದನ್ನು ನೀವು ನೋಡುವಿರಿ. ಮೊದಲು ಅವಿದ್ಯಾವಂತನಾದ ಅಪ್ರಬುದ್ಧಬುದ್ಧಿಯವನು ದೇವರು ಎಲ್ಲೊ ದೂರದ ಸ್ವರ್ಗದಲ್ಲಿ ದೊಡ್ಡ ನ್ಯಾಯಾಧಿಪತಿಯಂತೆ ಸಿಂಹಾಸನದಮೇಲೆ ಕುಳಿತಿರುವನೆಂದು ಭಾವಿಸುವನು. ಅವನನ್ನು

ಬೇಕೆಯುಂತೆ ಭಾವಿಸುವನು, ಭಯಾನಕ ವ್ಯಕ್ತಿ ಅವನು. ಅದೇನೊ ಒಳ್ಳೆಯದೆ, ಅದರಲ್ಲಿ ಏನೂ ಬಾಧಕವಿಲ್ಲ. ಮಾನವಕೋಟಿ ಅಸತ್ಯದಿಂದ ಸತ್ಯದೆಡೆಗೆ ಹೋಗುತ್ತಿಲ್ಲ, ಅದು ಸತ್ಯದಿಂದ ಮತ್ತೊಂದು ಸತ್ಯದೆಡೆಗೆ ಹೋಗುತ್ತಿದೆ, ಅಥವಾ ನೀವು ಬೇಕಾದರೆ ಸಣ್ಣಸತ್ಯದಿಂದ ದೊಡ್ಡ ಸತ್ಯದೆಡೆಗೆ ಹೋಗುತ್ತಿರುವುದು ಎಂದು ವಿಶದವಾಗಿ ಹೇಳ ಬಹುದು. ಆದರೆ ಎಂದಿಗೂ ಅಸತ್ಯದಿಂದ ಸತ್ಯಕ್ಕಲ್ಲ ನೀವು ಇಲ್ಲಿಂದ ನೇರವಾಗಿ ಸೂರ್ಯನೆಡೆಗೆ ಹೋದಡುತ್ತೀರಿ ಎಂದು ಭಾವಿಸೋಣ ಇಲ್ಲಿಗೆ ಸೂರ್ಯ ಸಣ್ಣದಾಗಿ ಕಾಣುವನು. ನೀವು ಸುಮಾರು ಕೋಟಿ ಮೈಲಿ ಹೋದರೆ ಅವನು ಬಹು ದೊಡ್ಡದಾಗಿ ಕಾಣುವನು. ಹಂತಹಂತಕ್ಕೂ ಅವನು ದೊಡ್ಡದಾಗುತ್ತಾ ಬರುವನು ಸೂರ್ಯನ ಇಪ್ಪತ್ತು ಸಾವಿರ ಛಾಯಾಚಿತ್ರಗಳನ್ನು ಬೇರೆ ಬೇರೆ ಕಡೆಯಿಂದ ತೆಗೆದುಕೊಂಡರು ಎಂದು ಭಾವಿಸೋಣ ಈ ಛಾಯಾಚಿತ್ರಗಳೆಲ್ಲ ವ್ಯತ್ಯಾಸವಾಗಿರುವುದು ಸತ್ಯ. ಆದರೆ ಪ್ರತಿಯೊಂದೂ ಒಂದೇ ಸೂರ್ಯನ ಛಾಯಾಚಿತ್ರ ಎಂಬುದನ್ನು ನೀವು ಅಲ್ಲಗಳೆಯುವಿರಾ? ಇದರಂತೆಯೆ ಎಲ್ಲಾ ಸಣ್ಣ ದೊಡ್ಡ ಧರ್ಮ ಗಳೂ ಕೂಡ ಸ್ವಯಂಪ್ರಕಾಶಮಾನನಾದ ದೇವರ ಬೇರೆ ಬೇರೆ ಕಡೆ ಯಿಂದ ತೆಗೆದ ಚಿತ್ರವಷ್ಟೆ. ಆದಕಾರಣ ಪ್ರಪಂಚದಲ್ಲೆಲ್ಲಾ ಅಪ್ರಬುದ್ಧ ಜನಸಾಮಾನ್ಯರ ಧರ್ಮದಲ್ಲೆಲ್ಲಾ ದೇವರು ಪ್ರಕೃತಿಯ ಹೊರಗೆ ಇರುವನು, ಸ್ವರ್ಗದಲ್ಲಿ ವಿಹರಿಸುವನು, ಅವನು ಅಲ್ಲಿಂದ ಆಳುವನು. ಆತ ದುಷ್ಟ ಶಿಕ್ಷಕ ಶಿಷ್ಟರಕ್ಷಕ ಇಂತಹ ಭಾವನೆ ಯಾವಾಗಲೂ ಎಲ್ಲಾ ಕಡೆಯ ಲ್ಲಿಯೂ ಇರಲೇಬೇಕಾಗುವುದು ಮನುಷ್ಯ ಮುಂದುವರಿದಂತೆ ದೇವರು ಸರ್ವವ್ಯಾಪಿ, ಅವನು ತನ್ನಲ್ಲಿಯೂ ಇರಬೇಕು, ಅವನೇ ಸರ್ವಾಂತರಾತ್ಮ ಎಂದು ಭಾವಿಸುವನು. ನನ್ನ ಜೀವ ಹೇಗೆ ನನ್ನ ದೇಹವನ್ನು ಚಾಲಿಸು ವುದೋ ಹಾಗೆಯೆ ದೇವರು ನನ್ನ ಜೀವವನ್ನು ಆಡಿಸುತ್ತಿರುವನು. ಅವನು ಅಂತರಾತ್ಮ ತುಂಬಾ ಮುಂದುವರಿದ ಕೆಲವರು, ಪರಿಶುದ್ಧಾತ್ಮ ರಾದ ಕೆಲವರು, ಇನ್ನೂ ಮುಂದೆ ಹೋಗಿ ದೇವರನ್ನು ಕಂಡರು. ನ್ಯೂಟೆಸ್ಟಮೆಂಟ್ ಹೇಳುವಂತೆ "ಪರಿಶುದ್ಧಾತ್ಮರೆ ಧನ್ಯರು ಅವರೆ ದೇವರನ್ನು ನೋಡುವರು" ಕೊನೆಗೆ ಅವರಿಗೆ ತಾವು ಮತ್ತು ತಂದೆ ಇಬ್ಬರೂ ಒಂದೆ ಎಂದು ಗೊತ್ತಾಯಿತು.

ಈ ಮೂರು ಸ್ಥಿತಿಗಳನ್ನೂ ಆ ಮಹಾಬೋಧಕ ಹೊಸ ಟೆಸ್ಟ

ಮೆಂಟಿನಲ್ಲಿ ಸಾರುವನು "ಸ್ವರ್ಗದಲ್ಲಿರುವ ತಂದೆ, ಧನ್ಯವಾಗಲಿ ನಿನ್ನ ನಾಮ" ಎಂಬ ಸಾಮಾನ್ಯ ಪ್ರಾರ್ಥನೆಯನ್ನು ಗಮನಿಸಿ. ಇದು ಸಾಮಾನ್ಯ ಪ್ರಾರ್ಥನೆ. ಎಳೆ ಹಸುಳೆಯ ಪ್ರಾರ್ಥನೆ ಇದು ಸಾಮಾನ್ಯ ಪ್ರಾರ್ಥನೆ, ಅವಿದ್ಯಾವಂತರಿಗೆ ಬೋಧಿಸಿದುದು ಎಂಬುದನ್ನು ಗಮನಿಸಿ. ಮುಂದುವರಿದ ಸ್ವಲ್ಪ ವಿದ್ಯಾವಂತರಿಗೆ "ನಾನು ತಂದೆಯಲ್ಲಿರುವೆನು. ನೀವು ನನ್ನಲ್ಲಿರುವಿರಿ ನಾನು ನಿಮ್ಮಲ್ಲಿರುವೆನು" ಎಂಬ ಸ್ವಲ್ಪ ಉತ್ತಮ ಬೋಧನೆಯನ್ನು ಕೊಡುವನು. ಇದು ನಿಮಗೆ ಜ್ಞಾಪಕವಿದೆಯೆ? ತಾನಾರೆಂದು ಯಹೂದ್ಯರು ಅವನನ್ನು ಕೇಳಿದಾಗ, ತಾನು ತನ್ನ ತಂದೆ ಇಬ್ಬರೂ ಒಂದೇ ಎಂದನು. ಯಹೂದ್ಯರು ಇವನೊಬ್ಬ ಈಶ್ವರನಿಂದಕನೆಂದು ಭಾವಿಸಿದರು. ಕ್ರಿಸ್ತ ಹೀಗೆಂದುದರ ಅರ್ಥವೇನು? ನಿಮ್ಮ ಪುರಾತನ ದೇವದೂತರು ಕೂಡ "ನೀವೆಲ್ಲ ದೇವರು, ಆ ಪವಿತ್ರೋತ್ತಮನ ಮಕ್ಕಳು" ಎಂದು ಹೇಳಿರುವರು. ಈ ಮೂರು ಮೆಟ್ಟಲುಗಳನ್ನೂ ನೀವು ಗಮನಿಸಿ ಮೊದಲ ಮೆಟ್ಟಲಿನಿಂದ ಪ್ರಾರಂಭಿಸಿ ಕೊನೆ ಮುಟ್ಟುವುದು ಸುಲಭವೆಂದು ನಿಮಗೆ ಅರಿವಾಗುವುದು.

ದೇವದೂತ ಮಾರ್ಗದರ್ಶಿಯಾಗಲು ಬಂದನು. ಆಧ್ಯಾತ್ಮ ಬಾಹ್ಯ ಆಚರಣೆಯಲ್ಲಿ ಇಲ್ಲ. ತತ್ತ್ವಶಾಸ್ತ್ರದ ಜಟಿಲ ಸಮಸ್ಯೆಗಳಿಂದ ನೀವು ಅಧ್ಯಾತ್ಮವನ್ನು ಅರಿಯಲಾರಿರಿ ನಿಮಗೆ ಪಾಂಡಿತ್ಯವಿಲ್ಲದೆ ಇದ್ದರೆ ಮೇಲು. ನೀವು ಒಂದು ಗ್ರಂಥವನ್ನೂ ಓದದೆ ಇದ್ದರೆ ಮೇಲು. ಐಶ್ವರ್ಯ ಅಂತಸ್ತು, ಅಧಿಕಾರ ಇವಾವುವೂ ಮುಕ್ತಿಗೆ ಅವಶ್ಯಕವಿಲ್ಲ ಆವಶ್ಯಕವಾಗಿರುವುದು ಹೃದಯ ನೈರ್ಮಲ್ಯ "ಪರಿಶುದ್ಧಾತ್ಮರೆ ಧನ್ಯರು". ಆತ್ಮ ಸ್ವಭಾವತಃ ಪರಿಶುದ್ಧವಾದುದು. ಅದು ಮತ್ತೇನು ಆಗಬೇಕು? ಅದು ಭಗವಂತನದು, ಭಗವಂತನಿಂದ ಬಂದಿದೆ ಬೈಬಲಿನ ಭಾಷೆಯಲ್ಲಿ ಇದೇ ಭಗವಂತನ ಉಸಿರು. ಖುರಾನಿನ ಭಾಷೆಯಲ್ಲಿ ಅದೇ ದೇವರ ಆತ್ಮ. ಭಗವಂತನ ಆತ್ಮ ಎಂದಾದರೂ ಅಶುದ್ಧವಾಗುವುದೆಂದು ಭಾವಿಸುವಿರೇನು? ಆದರೆ ಅದು ನಮ್ಮ ಒಳ್ಳೆಯ ಕೆಟ್ಟ ಕರ್ಮಗಳ ಧೂಳು ಕೊಳೆಯಿಂದ ಆವೃತವಾದಂತೆ ಇರುವುದು. ಹಲವು ಅಸತ್ಯವಾದ ಅಧರ್ಮಕರ್ಮದ ಧೂಳು ಜೀವಿಯನ್ನು ಆವರಿಸಿದಂತೆ ಇರುವುದು. ಧೂಳು ಕೊಳೆಯನ್ನು ಶುದ್ಧಮಾಡಿದರೆ ಆತ್ಮ ತಕ್ಷಣವೇ ಹೊಳೆಯುವುದು. "ಪರಿಶುದ್ಧರೆ ಧನ್ಯರು, ಅವರೆ ದೇವರನ್ನು ನೋಡುವರು" ಭಗವಂತನ

ಪೀಠ ನಿನ್ನಲ್ಲಿರುವುದು." ಭಗವಂತನಿರವನ್ನು ಮತ್ತೆಲ್ಲಿ ಅರಸಲು ಹೊರಡುವುದು? ನಜರತ್ತಿನ ಜೀಸಸ್ಸನ್ನು ಕೇಳಿ. ಅದು ನಿಮ್ಮಲ್ಲಿಯೆ ಇರುವುದು ಅದನ್ನು ಶುದ್ಧಿಮಾಡಿ. ಅದಲ್ಲೆ ಇರುವುದು. ಆದಾಗಲೆ ನಿನ್ನದು. ನೀವು ಅಮೃತಕ್ಕೆ ಹಕ್ಕುದಾರರು. ಅನಂತಾತ್ಮನ ಮಕ್ಕಳು ದೇವದೂತನ ಮಹಾಬೋಧನೆ ಇದು. ಮತ್ತೊಂದು, ಎಲ್ಲಾ ಧರ್ಮಗಳ ತಳಹದಿಯಂತಿರುವುದೇ ತ್ಯಾಗ. ನೀವು ಆತ್ಮನನ್ನು ಹೇಗೆ ಶುದ್ಧಮಾಡುವಿರಿ? ತ್ಯಾಗದಿಂದ ಒಬ್ಬ ಶ್ರೀಮಂತ ತರುಣ ಕ್ರಿಸ್ತನನ್ನು "ಗುರುದೇವ, ನಾನು ಭಗವಂತನನ್ನು ಸೇರಬೇಕಾದರೆ ಏನು ಮಾಡಬೇಕು?" ಎಂದು ಕೇಳಿದನು ಅದಕ್ಕೆ ಕ್ರಿಸ್ತನು "ನೀನೊಂದನ್ನು ಮಾಡಿಲ್ಲ, ಹೋಗು ನಿನ್ನಲ್ಲಿರುವುದನ್ನೆಲ್ಲ ಮಾರು ಅದನ್ನು ಬಡವರಿಗೆ ಕೊಡು. ನಿನಗೆ ಸ್ವರ್ಗದಲ್ಲಿ ಐಶ್ವರ್ಯ ದೊರಕುವುದು. ಒಂದು ಶಿಲುಬೆಯನ್ನು ಹೊತ್ತು ನನ್ನನ್ನು ಅನುಸರಿಸು" ಎಂದನು ಇದನ್ನು ಕೇಳಿ ಆ ತರುಣನಿಗೆ ವ್ಯಥೆಯಾಯಿತು. ಆತನಿಗೆ ಬಹಳ ಸಂಪತ್ತು ಇತ್ತು ನಾವೆಲ್ಲ ಹೆಚ್ಚು ಕಡಿಮೆ ಹಾಗೆಯೆ ಹಗಲು ರಾತ್ರಿ ಆ ಧ್ವನಿ ನಮ್ಮ ಕಿವಿಯಲ್ಲಿ ಅನುರಣಿತವಾಗುತ್ತಿರುತ್ತದೆ ನಮ್ಮ ಸುಖಭೋಗಗಳ ಮಧ್ಯೆ ನಾವು ಪ್ರಪಂಚದಲ್ಲಿ ನಿರತರಾಗಿದ್ದಾಗ ನಾವೆಲ್ಲವನ್ನೂ ಮರೆತಂತೆ ತೋರುವುದು ಸ್ವಲ್ಪಹೊತ್ತು ನಿಂತು ಪುನಃ ಆ ಧ್ವನಿ ಕೇಳಿಸುವುದು. "ನಿನ್ನಲ್ಲಿರುವುದನ್ನೆಲ್ಲಾ ತ್ಯಜಿಸಿ ನನ್ನನ್ನು ಅನುಸರಿಸು." "ಯಾರು ತಮ್ಮ ಪ್ರಾಣವನ್ನು ಸಂರಕ್ಷಿಸುವರೊ ಅವರು ಅದನ್ನು ಕಳೆದುಕೊಳ್ಳುವರು. ಯಾರು ನನಗಾಗಿ ತಮ್ಮ ಪ್ರಾಣವನ್ನು ಕಳೆದುಕೊಳ್ಳುವರೊ ಅವರು ಅದನ್ನು ಪಡೆಯುವರು." ಭಗವಂತನಿಗಾಗಿ ಯಾರು ತಮ್ಮ ಪ್ರಾಣವನ್ನು ಕಳೆದುಕೊಳ್ಳುವರೊ ಅವರು ಅನಂತಾತ್ಮನನ್ನು ಪಡೆಯುವರು. ನಮ್ಮ ದುರ್ಬಲತೆಯ ಮಧ್ಯೆ ಒಂದು ಕ್ಷಣ ಸ್ತಬ್ಧತೆ ಬರುವುದು. ಆಗ "ನಿಮ್ಮಲ್ಲಿರುವುದನ್ನೆಲ್ಲ ತ್ಯಜಿಸಿ ದೀನರಿಗೆ ದಾನಮಾಡಿ ನನ್ನನ್ನು ಅನುಸರಿಸಿ." ಅವನು ಬೋಧಿಸುವ ಆದರ್ಶ ಇದೊಂದೆ. ಜಗದ ಎಲ್ಲಾ ಮಹಾತ್ಮರೂ ಸಾರಿದ ಬೋಧನೆಯೆ ಇದು--ತ್ಯಾಗ. ತ್ಯಾಗವೆಂದರೇನು? ನೀತಿಯಲ್ಲಿ ಏಕಮಾತ್ರ ಆದರ್ಶವಿರುವುದು. ಅದೇ ನಿಸ್ವಾರ್ಥತೆ ನಿಸ್ವಾರ್ಥನಾಗು. ಪೂರ್ಣ ನಿಸ್ವಾರ್ಥತೆಯೆ ಆದರ್ಶ. ಬಲಗೆನ್ನೆಗೆ ಹೊಡೆದರೆ ಎಡಗೆನ್ನೆಯನ್ನು ತೋರುವನು. ಅವನ ಅಂಗಿಯನ್ನು ಕಸಿದುಕೊಂಡರೆ ಶರಾಯಿಯನ್ನು ಕೊಡುವನು.

ನಾವು ಆದರ್ಶವನ್ನು ಅಧೋಗತಿಗೆ ತರದೆ ಸಾಧ್ಯವಾದಷ್ಟು ಅನುಷ್ಠಾನಕ್ಕೆ ತರಲು ಯತ್ನಿಸಬೇಕು ಆದರ್ಶವಿಲ್ಲಿದೆ. ಎಂದು ಮನುಷ್ಯ ನಲ್ಲಿ ಸ್ವಾರ್ಥತೆ ಇಲ್ಲವೊ, ಆಸ್ತಿಪಾಸ್ತಿಗಳಿಲ್ಲವೊ ನಾನು ನನ್ನದು ಎಂಬು ದಿಲ್ಲವೊ, ಯಾರು ಸಂಪೂರ್ಣ ತನನ್ನು ತೆತ್ತಿರುವನೊ, ತನ್ನ ಅಹಂಕಾರ ವನ್ನು ಸಂಪೂರ್ಣ ನಿರ್ನಾಮಮಾಡಿಕೊಂಡಿರುವನೊ ಅಂತಹವನಲ್ಲಿ ದೇವರೆ ಇರುವನು. ಏಕೆಂದರೆ ಅವನಲ್ಲಿ ಸ್ವಾರ್ಥ ಆಸಕ್ತಿ ಇಲ್ಲ. ಸಂಪೂರ್ಣ ನಾಶವಾಗಿದೆ; ನಿರ್ನಾಮವಾಗಿದೆ. ಇವನೆ ಆದರ್ಶಮನುಷ್ಯ. ಆ ಸ್ಥಿತಿಯನ್ನು ನಾವಿನ್ನೂ ಪಡೆದಿಲ್ಲ ಆದರೂ ಆದರ್ಶವನ್ನು ಆರಾಧಿ ಸುವ ನಿಧಾನವಾಗಿ, ತಪ್ಪುಹೆಜ್ಜೆಗಳನ್ನಿಟ್ಟಾದರೂ ಅದನ್ನು ನೋಡೋಣ. ಅದು ನಾಳೆಯೆ ಆಗಬಹುದು ಅಥವಾ ಸಾವಿರವರುಷವಾದಮೇಲೆ ಇರ ಬಹುದು. ಆದರೆ ನಾವು ಗುರಿಯನ್ನು ಒಂದಲ್ಲ ಒಂದುದಿನ ಸೇರಲೆ ಬೇಕು ನಿಸ್ಸ್ವಾರ್ಥನಾಗುವುದು, ಸಂಪೂರ್ಣ ನಿಸ್ವಾರ್ಥನಾಗುವುದೆಂದರೆ ಅದೇ ಮುಕ್ತಿ. ಒಳಗಿರುವ ಮಾನವ ಅಳಿದು ದೇವನೊಬ್ಬನೇ ಉಳಿಯು ವನು.

ಮತ್ತೊಂದು ವಿಷಯ. ಜಗದ ಗುರುಗಳೆಲ್ಲ ತ್ಯಾಗಿಗಳು ನಜ ರತ್ತಿನ ಜೀಸಸ್ ಬೋಧಿಸುತ್ತಿದ್ದ ಎಂದು ಭಾವಿಸಿ. ಒಬ್ಬ ಮನುಷ್ಯ ಅವರ ಬಳಿಗೆ ಬಂದು "ನೀನು ಹೇಳುವುದು ಸುಂದರವಾಗಿದೆ ಪೂರ್ಣ ತೆಗೆ ಇದೆ ದಾರಿ ಎಂದು ನಂಬುತ್ತೇನೆ ನಾನು ಇದನ್ನು ಅನುಸರಿಸಲು ಸಿದ್ಧನಾಗಿರುವೆನು. ಆದರೆ ನಾನು ನೀನೊಬ್ಬನೇ ದೇವರ ಮಗ ಎಂದು ಪೂಜಿಸಲಾರೆ" ಎನ್ನುವನು ಎಂದು ಭಾವಿಸೋಣ. ಇದಕ್ಕೆ ಕ್ರಿಸ್ತನ ಉತ್ತರ ಏನಿರಬಹುದೆಂದು ನೀವು ಊಹಿಸುವಿರಿ? "ಒಳ್ಳೆಯದು ಸಹೋದರನೆ, ಆದರ್ಶವನ್ನು ಅನುಸರಿಸು, ನಿನ್ನ ಮಾರ್ಗದಲ್ಲಿಯೆ ಮುಂದುವರಿ ನೀನು ನನ್ನ ಬೋಧನೆಯನ್ನು ಗೌರವಿಸುವೆಯೊ ಇಲ್ಲವೊ ಅದನ್ನು ಲೆಕ್ಕಿಸುವುದಿಲ್ಲ. ನಾನು ವರ್ತಕನಲ್ಲ, ಧರ್ಮವನ್ನು ವಿಕ್ರಯ ಮಾಡುವುದಿಲ್ಲ. ನಾನು ಕೇವಲ ಸತ್ಯವನ್ನು ಮಾತ್ರ ಬೋಧಿಸುತ್ತೇನೆ. ಅದು ಯಾರ ವಸ್ತುವೂ ಅಲ್ಲ ಯಾರೂ ಸತ್ಯವನ್ನು ಇದು ನಮ್ಮದು ಎಂದು ಹೇಳಿಕೊಳ್ಳಲಾರರು. ಸತ್ಯವೇ ದೇವರು, ಮುಂದುವರಿ." ಆದರೆ ಈಗ ಅವನ ಶಿಷ್ಯರು ಏನು ಹೇಳುತ್ತಾರೆ ಎಂದರೆ: "ನೀನು ಬೋಧನೆ ಯನ್ನು ಅನುಷ್ಠಾನಕ್ಕೆ ತರುವೆಯೊ ಇಲ್ಲವೊ ಚಿಂತೆಯಿಲ್ಲ. ನೀನು ವ್ಯಕ್ತಿಗೆ

ಗೌರವ ತೋರಿಸುವೆಯಾ? ವ್ಯಕ್ತಿಗೆ ಗೌರವ ತೋರಿದರೆ ನೀನು ಉದ್ಧಾರವಾಗುವೆ. ಇಲ್ಲದೆ ಇದ್ದರೆ ನೀನು ಉದ್ಧಾರವಾಗಲಾರೆ.'' ಗುರುದೇವನ ಸಂದೇಶ ಹೀಗೆ ಅಧೋಗತಿಗೆ ಬಂದಿದೆ. ಈಗಿರುವ ಕಚ್ಚಾಟವೆಲ್ಲ ಆ ವ್ಯಕ್ತಿಗೆ ಮಾತ್ರ. ಇಂತಹ ವ್ಯತ್ಯಾಸವನ್ನು ತರುವುದರಿಂದ ಯಾರನ್ನು ಗೌರವಿಸಬೇಕೆಂದಿರುವರೊ ಅವರಿಗೆ ಅಗೌರವವನ್ನು ತರುತ್ತಿರುವರು. ಇಂತಹ ಭಾವನೆಯಿಂದ ಕ್ರಿಸ್ತನೆ ನಾಚಿಕೆಯಿಂದ ಹಿಂದೆ ಸರಿಯುತ್ತಿದ್ದ ಎಂಬುದನ್ನು ಅವರು ಅರಿಯರು. ಪ್ರಪಂಚದಲ್ಲಿ ತನ್ನನ್ನು ಒಂದು ವ್ಯಕ್ತಿಯಾದರೂ ಜ್ಞಾಪಕದಲ್ಲಿಟ್ಟಿರಲಿ ಬಿಡಲಿ ಅವನು ಅದನ್ನು ಲೆಕ್ಕಿಸುತ್ತಿದ್ದನೇನು? ಅವನು ಆ ಸಂದೇಶವನ್ನು ಸಾರಬೇಕಾಗಿತ್ತು, ಸಾರಿದನು. ಅವನಿಗೆ ಇಪ್ಪತ್ತು ಸಾವಿರ ಜನ್ಮಗಳಿದ್ದರೂ ಜಗದ ಅತಿ ದರಿದ್ರನಿಗೆ ಅದನ್ನು ಧಾರೆಯೆರೆಯುತ್ತಿದ್ದನು. ಕೋಟ್ಯಂತರ ಅವಹೇಳನಕ್ಕೆ ಗುರಿಯಾದ ಜನರಿಗಾಗಿ ಕೋಟ್ಯಂತರ ವೇಳೆ ಅವನು ಹಿಂಸೆಗೆ ಈಡಾಗಬೇಕಾದರೂ ಅವರಲ್ಲಿ ಪ್ರತಿಯೊಬ್ಬರ ಮೋಕ್ಷಕ್ಕೂ ತಾನು ಪ್ರಾಯಶ್ಚಿತ್ತಾರ್ಥವಾಗಿ ಹಿಂಸೆಯನ್ನು ಅನುಭವಿಸಬೇಕಾದರೂ ತನ್ನ ಪ್ರಾಣವನ್ನು ಕೊಡುತ್ತಿದ್ದನು. ಮತ್ತೊಂದು ವ್ಯಕ್ತಿಗೆ ತನ್ನ ಹೆಸರು ತಿಳಿಯಲಿ ಎಂಬ ಭಾವವಿಲ್ಲದೆ ಈ ಮಹಾತ್ಯಾಗವನ್ನು ಮಾಡುತ್ತಿದ್ದನು. ಮೌನವಾಗಿ ಮತ್ತೊಬ್ಬರಿಗೆ ತಿಳಿಯದ ಶಾಂತಿಯಿಂದ ದೇವರು ಕೆಲಸಮಾಡುವಂತೆ ಇವನು ಮಾಡುತ್ತಿದ್ದನು. ಈಗ ಅವನ ಶಿಷ್ಯರು ಏನು ಹೇಳುತ್ತಾರೆ— "ನೀನು ಪರಿಪೂರ್ಣನಾಗಿರಬಹುದು, ಶುದ್ಧ ನಿಸ್ವಾರ್ಥಿಯಾಗಿರಬಹುದು, ಆದರೂ ನಮ್ಮ ಬೋಧಕನಿಗೆ ಮಹಾತ್ಮನಿಗೆ ಗೌರವ ತೋರದಹೋದರೆ ಪ್ರಯೋಜನವಿಲ್ಲ'' ಎನ್ನುವರು. ಏತಕ್ಕೆ? ಈ ಅಜ್ಞಾನಕ್ಕೆ ಮೂಢನಂಬಿಕೆಗೆ ಕಾರಣವೇನು? ಶಿಷ್ಯರು ದೇವರು ಒಮ್ಮೆ ಮಾತ್ರ ವ್ಯಕ್ತವಾಗುವನು ಎಂದು ತಿಳಿಯುವರು. ಅವರ ದೋಷವೆಲ್ಲ ಇಲ್ಲಿ ಇರುವುದು. ದೇವರು ನಿಮಗೆ ಮಾನವನಂತೆ ವ್ಯಕ್ತನಾಗುವನು. ಆದರೆ ಪ್ರಕೃತಿಯಲ್ಲಿ ಯಾವುದು ಒಮ್ಮೆ ಆಗಿದೆಯೊ ಅದು ಹಿಂದೆ ಆಗಿರಬೇಕು ಮುಂದೆಯೂ ಆಗಬೇಕು. ನಿಯಮಬದ್ಧವಾಗದೆ ಇರುವುದು ಪ್ರಕೃತಿಯಲ್ಲಿ ಇಲ್ಲ. ಅಂದರೆ ಯಾವುದು ಒಮ್ಮೆ ಆಗಿದೆಯೊ ಅದು ಹಿಂದಯೂ ಆಗುತ್ತಿರಬೇಕು, ಮುಂದೆಯೂ ಆಗಬೇಕು.

ಭರತಖಂಡದಲ್ಲಿ ದೇವರ ಅವತಾರದಲ್ಲಿ ಇದೇ ಭಾವನೆಯನ್ನು

ಹೊಂದಿರುವರು ಅವರ ಅವತಾರಶ್ರೇಷ್ಠನೊಬ್ಬ ಶ್ರೀಕೃಷ್ಣ. ಅವನ ಭಗವದ್ಗೀತೆಯನ್ನು ನಿಮ್ಮಲ್ಲಿ ಹಲವರು ಓದಿರಬಹುದು ಅದರಲ್ಲಿ "ನಾನು ಅವ್ಯಕ್ತನಾದರೂ ಅಜನಾದರೂ ಸರ್ವಭೂತಗಳಿಗೆ ಒಡೆಯನಾದರೂ ನನ್ನ ಪ್ರಕೃತಿಯನ್ನು ಸ್ವಾಧೀನಮಾಡಿಕೊಂಡು ನನ್ನ ಮಾಯೆಯಿಂದ ಪ್ರಪಂಚಕ್ಕೆ ಬರುವೆನು ಎಂದು ಅಧರ್ಮ ಹೆಚ್ಚುವುದೊ, ಧರ್ಮ ಕುಗ್ಗುವುದೊ ಆಗ ನಾನು ಜನ್ಮವೆತ್ತುವೆನು. ಶಿಷ್ಟರನ್ನು ಪರಿಪಾಲಿಸುವುದಕ್ಕೆ ದುಷ್ಟರನ್ನು ನಿಗ್ರಹಿಸುವುದಕ್ಕೆ ಧರ್ಮಸಂಸ್ಥಾಪನೆಗೆ ನಾನು ಪುನಃ ಪುನಃ ಅವತಾರವೆತ್ತುತ್ತೇನೆ" ಎಂದಿರುವನು. ಎಂದು ಪ್ರಪಂಚ ಅವನತಿಗೆ ಇಳಿಯುವುದೊ ಅದನ್ನು ಉದ್ಧರಿಸಲು ಬರುವನು. ಇದನ್ನು ಕಾಲಕಾಲಕ್ಕೆ ಬೇರೆ ಬೇರೆ ದೇಶಗಳಲ್ಲಿ ಮಾಡುವನು ಮತ್ತೊಂದು ಕಡೆ ಅವನು ಹೀಗೆ ಹೇಳುವನು: "ಎಲ್ಲಿ ಒಬ್ಬನು ಅಸಾಧ್ಯ ಶಕ್ತಿ ಮತ್ತು ಪವಿತ್ರತೆಯಿಂದ ಜಗದುದ್ಧಾರಕ್ಕೆ ಪ್ರಯತ್ನಿಸುತ್ತಿರುವನೊ ಅವನು ನನ್ನ ಅಂಶದಿಂದ ಜನಿಸಿರುವನೆಂದು ತಿಳಿ ನಾನು ಅವನ ಮೂಲಕ ಕೆಲಸ ಮಾಡುತ್ತಿರುವೆನು."

ಆದಕಾರಣ ನಾವು ದೇವರನ್ನು ಏಸುಕ್ರಿಸ್ತನೊಬ್ಬನಲ್ಲಿ ಮಾತ್ರ ಕಾಣಪೆ ಅವನಿಗಿಂತ ಮುಂಚೆ ಬಂದ ಎಲ್ಲಾ ಮಹಾತ್ಮರಲ್ಲಿಯೂ ಅನಂತರ ಬಂದವರಲ್ಲಿಯೂ ಇನ್ನು ಮುಂದೆ ಬರುವವರಲ್ಲಿಯೂ ಕಾಣುವ. ನಮ್ಮ ಆರಾಧನೆ ಅನಿರ್ಬಂಧವಾದುದು ಸ್ವಾಭಾವಿಕವಾದುದು. ಇವರೆಲ್ಲ ಒಬ್ಬನೇ ಭಗವಂತನ ಆವಿರ್ಭಾವನೆ ಅವರೆಲ್ಲ ಪರಿಶುದ್ಧರು, ನಿಸ್ವಾರ್ಥಿಗಳು, ಅವರೆಲ್ಲ ನಮ್ಮಂತಹ ದೀನಮಾನವರ ಉದ್ಧಾರಕ್ಕೆ ಹೋರಾಡಿ ಪ್ರಾಣವನ್ನು ಅರ್ಪಿಸಿರುವರು. ಅವರಲ್ಲಿ ಪ್ರತಿಯೊಬ್ಬರೂ ಎಲ್ಲರೂ ನಮ್ಮಲ್ಲಿ ಪ್ರತಿಯೊಬ್ಬರ ದೋಷಕ್ಕೂ ಮುಂದೆ ಬರುವವರ ದೋಷಕ್ಕೂ ತಾವೆ ಪ್ರಾಯಶ್ಚಿತ್ತಮಾಡಿಕೊಳ್ಳುವರು ಒಂದು ದೃಷ್ಟಿಯಲ್ಲಿ ನೀವೆಲ್ಲಾ ಮಹಾತ್ಮರೆ, ಜಗದ ಭಾರವನ್ನು ನಿಮ್ಮ ಹೆಗಲ ಮೇಲೆ ಹೊರುವ ಮಹಾತ್ಮರೆ. ತಮ್ಮ ಜೀವನದ ಭಾರವನ್ನು ತಾವೆ ಮೌನವಾಗಿ ಸಾವಧಾನವಾಗಿ ಹೊರದ ಯಾವ ಸ್ತ್ರೀಪುರುಷರನ್ನಾಗಲಿ ನೀವು ನೋಡಿರುವಿರಾ? ಮಹಾದೇವದೂತರು ಭೀಮವ್ಯಕ್ತಿಗಳು, ಜಗದ ಭಾರವನ್ನು ಹೊತ್ತರು ಅವರೊಂದಿಗೆ ಹೋಲಿಸಿದರೆ ನಾವು ಕ್ಷುದ್ರವ್ಯಕ್ತಿಗಳೆಂಬುದೇನೊ ನಿಜ. ಆದರೂ ನಾವೂ ಅದೇ ಕೆಲಸವನ್ನು ನಮ್ಮ ಕಿರಿಯವಲಯಗಳಲ್ಲಿ,

ಮನೆಗಳಲ್ಲಿ ನಮ್ಮ ತೊಂದರೆಗಳನ್ನು ಹೊರುತ್ತಿರುವೆವು. ಎಂತಹ ಪಾಪಿಯಾಗಲಿ ಮೂರ್ಖನಾಗಲಿ ಎಲ್ಲರೂ ತಮ್ಮ ವ್ಯಾಕುಲವನ್ನು ತಾವೇ ಹೊರಬೇಕಾಗಿದೆ ನಾವು ಎಷ್ಟೇ ತಪ್ಪುಮಾಡಿರಲಿ, ಹೀನಕಾರ್ಯ ಆಲೋಚನೆಗಳನ್ನು ಮಾಡಿರಲಿ, ಎಲ್ಲೋ ಒಂದು ಕಡೆ ಪರಿಶುದ್ಧ ಸ್ಥಳವಿದೆ ಅನವರತ ನಮ್ಮನ್ನು ಭಗವಂತನೊಂದಿಗೆ ಸಂಬಂಧಿಸಿರುವ ಪೂರ್ಣತಂತು ಒಂದಿದೆ ಭಗವಂತನೊಂದಿಗೆ ಸಂಬಂಧ ಕಡಿದುಹೋದ ತಕ್ಷಣವೆ ಸರ್ವ ನಾಶ ಕಾದಿದೆ ಎಂದು ನಿಸ್ಸಂಶಯವಾಗಿ ತಿಳಿಯಿರಿ ಯಾರೂ ಸರ್ವನಾಶ ವಾಗಲಾರದೆ ಇರುವುದರಿಂದ ನಮ್ಮ ಹೃದಯಾಂತರಾಳದಲ್ಲಿ ಎಷ್ಟೇ ಅಸ್ಪಷ್ಟವಾದರೂ ಭಗವಂತನೊಂದಿಗೆ ಸಂಬಂಧ ಕಲ್ಪಿಸಿಕೊಂಡಿರುವ ಜ್ಯೋತಿವ್ಯಕ್ತವೊಂದಿದೆ ಪೂರ್ವಮಹಾತ್ಮರು ಯಾವ ಕುಲಗೋತ್ರ ದೇಶಕ್ಕೆ ಸೇರಿರಲಿ, ಅವರ ಜೀವನ ಮತ್ತು ಸಂದೇಶವನ್ನು ನಾವಿಂದು ಪಡೆದಿರುವೆವು ಅವರಿಗೆಲ್ಲಾ ಧನ್ಯವಾದ! ಈಗ ಮಾನವನ ಉದ್ಧಾರಕ್ಕೆ ಕೆಲಸಮಾಡುತ್ತಿರುವ ಈಶ್ವರಸಮಾನರಾದ ಸ್ತ್ರೀಪುರುಷರಿಗೆ ಅವರು ಯಾವ ಜಾತಿ ಜನಾಂಗ ಬಣ್ಣಕ್ಕೆ ಸೇರಿರಲಿ ಅವರಿಗೆಲ್ಲಾ ನಮ್ಮ ಧನ್ಯ ವಾದ! ನಮ್ಮ ನಂತರ ಬರುವ ಜನರ ಉದ್ಧಾರಕ್ಕೆ ನಿಸ್ವಾರ್ಥದಿಂದ ಕೆಲಸಮಾಡುವ ಚಲಮಾನ ಈಶ್ವರನಿಗೆ ನಮ್ಮ ಧನ್ಯವಾದ!



| | | ರೂ. | ಆ. | ಕಾ. |
|---|---|---|---|---|
| ಧನ್ಯತೆಗೆ ದಾರಿ | .... | ೧ | ೦ | ೦ |
| ಅನುಷ್ಠಾನ ವೇದಾಂತ | .... | ೧ | ೦ | ೦ |
| ಶ್ರೀ ರಾಮಕೃಷ್ಣ | .... | ೦ | ೧೨ | ೦ |
| ವೇದಾಂತ | .... | ೦ | ೧೦ | ೦ |
| ವಿದ್ಯಾಭ್ಯಾಸ | .... | ೦ | ೧೦ | ೦ |
| ಹಿಂದೂ ಧರ್ಮಸಾರ | .... | ೦ | ೧೦ | ೦ |
| ವರ್ತಮಾನ ಭಾರತ | .... | ೦ | ೧೦ | ೦ |
| ವಿವೇಕವಾಣಿ | .... | ೦ | ೧೦ | ೦ |
| ನನ್ನ ಗುರುದೇವ | .... | ೦ | ೮ | ೦ |
| ಭಕ್ತಿಮಾರ್ಗ | .... | ೦ | ೮ | ೦ |
| ಚಿಕಾಗೋ ಉಪನ್ಯಾಸ | .... | ೦ | ೬ | ೦ |
| ಆರತಿ | .... | ೦ | ೬ | ೦ |
| ಮುಮುಕ್ಷು ಲಕ್ಷಣ | .... | ೦ | ೪ | ೦ |
| ನನ್ನ ಜೀವನ ಮತ್ತು ಧ್ಯೇಯ | .... | ೦ | ೪ | ೦ |
| ಈಶ್ವರಾನುರಾಗ | .... | ೦ | ೪ | ೦ |
| ನೊಂದ ಜೀವಕ್ಕೆ ಭರವಸೆ | .... | ೦ | ೪ | ೦ |
| ಭಾರತ ಮಹಿಳೆ | .... | ೦ | ೪ | ೦ |
| ಕರ್ಮರಹಸ್ಯ | .... | ೦ | ೪ | ೦ |
| ಸಾಧನ | .... | ೦ | ೪ | ೦ |
| ಪವಹಾರಿ ಬಾಬಾ | .... | ೦ | ೪ | ೦ |
| ದೇವದೂತ ಏಸುಕ್ರಿಸ್ತ | .... | ೦ | ೪ | ೦ |
| ಮನೋಶಕ್ತಿ | .... | ೦ | ೪ | ೦ |

**ಶ್ರೀ ರಾಮಕೃಷ್ಣಾಶ್ರಮ, ಮೈಸೂರು.**

---

ಶ್ರೀಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು

# ಶ್ರೀ ರಾಮಕೃಷ್ಣಾಶ್ರಮದ ಪ್ರಕಟಣೆಗಳು

## ಮೈಸೂರು



| | | ರೂ. | ಆ | ಕಾ. |
|---|---|---|---|---|
| ಕೊಲಂಬೊ ಇಂದ ಆಲ್ಮೋರಕೆ | .... | ೫ | ೦ | ೦ |
| ಶ್ರೀ ರಾಮಕೃಷ್ಣ ಉಪದೇಶಾಮೃತ | .... | ೩ | ೮ | ೦ |
| ಸ್ವಾಮಿ ವಿವೇಕಾನಂದ (ಕುವೆಂಪು) | .... | ೩ | ೮ | ೦ |
| ಪತ್ರಮಾಲೆ | .... | ೩ | ೦ | ೦ |
| ಜ್ಞಾನಯೋಗ | .... | ೩ | ೦ | ೦ |
| ರಾಜಯೋಗ | .... | ೨ | ೧೦ | ೦ |
| ಶ್ರೀ ಶಾರದಾದೇವಿ ಸಂಭಾಷಣೆ | .... | ೨ | ೮ | ೦ |
| ಗೀತಾಪತ್ರಗಳು | .... | ೨ | ೮ | ೦ |
| ಶ್ರೀ ಶಾರದಾದೇವಿ | .... | ೨ | ೦ | ೦ |
| ಪರಮಾರ್ಥ ಪ್ರಸಂಗ | .... | ೨ | ೦ | ೦ |
| ಕರ್ಮಯೋಗ | .... | ೧ | ೮ | ೦ |
| ಬ್ರಹ್ಮಾನಂದ ವಚನ ಸುಧೆ | .... | ೧ | ೪ | ೦ |
| ಶ್ರೀ ರಾಮಕೃಷ್ಣ ಉಪನಿಷತ್ | .... | ೧ | ೪ | ೦ |
| ಪರಿವ್ರಾಜಕ | .... | ೧ | ೬ | ೦ |
| ಪ್ರಾಚ್ಯ ಮತ್ತು ಪಾಶ್ಚಾತ್ಯ | .... | ೧ | ೪ | ೦ |
| ಭಕ್ತಿಯೋಗ | .... | ೧ | ೦ | ೦ |
| ತ್ರಿವೇಣೀ (ಶ್ರೀ ರಾಮಕೃಷ್ಣ, ಸ್ವಾಮಿ ವಿವೇಕಾನಂದ, ಶಾರದಾದೇವಿ ಸಂಕ್ಷಿಪ್ತ ಜೀವನ) | .... | ೧ | ೦ | ೦ |
| ಶ್ರೀ ಗುರುದೇವರ ವಚನ | .... | ೧ | ೦ | ೦ |
| ಅಮರನಾಥ ಯಾತ್ರೆ | .... | ೧ | ೦ | ೦ |